# ರೂಪಸಿ

(ಕಥಾ ಸಂಗ್ರಹ)

ತ. ರಾ. ಸು

ಮಾರಾಟದ ಪೂರ್ಣಾಧಿಕಾರಿಗಳು :

ದೀಕ್ಷಿತ್ ಅಂಡ್ ಕೊ.,

ಬಸವನಗುಡಿ : ಬೆಂಗಳೂರು

ಮುದ್ರಕರು:
ಈಸ್ಟರ್ನ್ ಪ್ರೆಸ್,
ಜಯಚಾಮರಾಜ ರಸ್ತೆ
ಬೆಂಗಳೂರು ನಗರ

ಪ್ರಕಾಶಕರು:
ಕುಮಾರ ವೆಂಕಣ್ಣ,
'ಪ್ರಚಲಿತ ಸಾಹಿತ್ಯ'
ಬೆಂಗಳೂರು ನಗರ



ಪ್ರಥಮ ಮುದ್ರಣ
೧೯೪೬

ಬೆಲೆ:
೧—೪—೦

# ಮುನ್ನುಡಿ

ನವೋದಯದ ಉತ್ಸಾಹ, ಉದ್ವೇಗಗಳನ್ನು ಒಂದು ದಶಕಕಾಲ ಅನುಭವಿಸಿದ ಕನ್ನಡ ಸಾಹಿತ್ಯ ಹೀಗೇಕೆ ಕೊರಗುತ್ತಿದೆ ಎಂದು ವಿಚಾರ ಮಾಡುವವರಿಗೆ 'ರೂಪಸಿ' ಮರಳುಗಾಡಿನ ಕಾರಂಜಿ. ಆ ಕಾಲದಲ್ಲಿ ಸಣ್ಣಕಥೆ ನವನವೋನ್ಮೇಷಶಾಲಿನಿಯಾಗಿ ವರ್ಧಿಸಿತು. ಒಂದಲ್ಲ ನಾಲ್ಕು ಬಗೆ, ಒಬ್ಬಿಬ್ಬರಲ್ಲ ಹತ್ತಾರು ಒಳ್ಳೆಯ ಲೇಖಕರು. 'ಬೆಳೆ ಬೇಕಾದ ಹಾಗಿದೆ. ಕುಯ್ಯುವವರು ಇಲ್ಲವಲ್ಲಾ' ಎನ್ನುವ ಪರಿಸ್ಥಿತಿ. ಇದು ಕಾಲ ಗತಿಯಿಂದಲೊ ಲೇಖಕರ ಸ್ಫೂರ್ತಿದಾರಿದ್ರ್ಯದಿಂದಲೊ 'ಕುಯ್ಯುವವರು ಬೇಕಾದ ಹಾಗಿದ್ದಾರೆ. ಬೆಳೆಯಿಲ್ಲವಲ್ಲಾ' ಎನ್ನುವ ಸ್ಥಿತಿಗೆ ಬಂತು. ಈ ಅವಧಿಯಲ್ಲಿ ನಾಡಿನಲ್ಲಿ ಹಲವು ಮುಖದಿಂದಾದ ಜಾಗೃತಿಯ ಪರಿಣಾಮ ವಾಗಿ ಕನ್ನಡ ಪುಸ್ತಕಗಳನ್ನು ಓದುವವರ, ಕೊಳ್ಳುವವರ ಸಂಖ್ಯೆ ಬೆಳೆ ಯಿತು. ನವೋದಯಕ್ಕೆ ಕಾರಣಕರ್ತರಾದ ಲೇಖಕರು ಲೇಖನ ಸನ್ಯಾಸ ಸ್ವೀಕರಿಸಿದರು. ಅವರಲ್ಲಿ ಬರವಣಿಗೆಯನ್ನು ಮುಂದೊತ್ತುತ್ತಿದ್ದ ಕೆಲವರು ತಮ್ಮ ಹಿಂದಿನ ಕೃತಿಗಳಿಗೆ ಸರಿಗಟ್ಟುವ ಕೃತಿಗಳನ್ನಾಗಲಿ, ದೇಶದ ವಿಚಾರ ಶೀಲತೆಗೊಪ್ಪುವ ಕೃತಿಗಳನ್ನಾಗಲಿ ನಿರ್ಮಾಣ ಮಾಡಲಿಲ್ಲ. ಸಾಹಿತ್ಯದಲ್ಲಿ ಅಗಾಧ ಅಂಧಕಾರ ಪ್ರಾಪ್ತಿಯಾಯಿತು.

ಕವಿ ರವೀಂದ್ರರು ಒಂದು ಕಡೆ ಹೇಳಿದ್ದಾರೆ. ಮುಳುಗುವ ಸೂರ್ಯ ಜಗತ್ತನ್ನು ವಿಷಾದ, ಕನಿಕರಗಳಿಂದ ನೋಡುತ್ತಾ 'ಇನ್ನೇನು ಗತಿ – ಜಗತ್ತೆಲ್ಲಾ ಅಂಧಕಾರದಲ್ಲಿ ಮುಳುಗುತ್ತದೆ' ಎಂದನಂತೆ. ಆಗ ಪಕ್ಕ ದಲ್ಲಿದ್ದ ನಕ್ಷತ್ರ 'ನಮ್ಮ ಕೈಲಾದುದನ್ನು ನಾವು ಮಾಡುತ್ತೇವೆ' ಎಂದು ಹೇಳಿತಂತೆ. ಕನ್ನಡ ಸಾಹಿತ್ಯದ ಈ ಸೂರ್ಯಾಸ್ತಕಾಲದಲ್ಲಿ ಮಿಂಚಿನಂತೆ ಪ್ರಗತಿಶೀಲ ಲೇಖಕರು ಸುಳಿದರು. ಸಾಹಿತ್ಯ ಪ್ರಪಂಚದಲ್ಲಿ ಮೂಡಿದ್ದ ನಿರ್ವಿಣ್ಣತೆ, ಆಲಸ್ಯ, ದಾಸೋಹಂಭಾವಗಳನ್ನು ತೊಡೆದು ಹಾಕಲೆತ್ನಿಸಿದರು. ಹಳೆಯ ಜಾಡು ಬಿಟ್ಟು, ಹೊಸ ಜಾಡನ್ನು ರಚಿಸಿದರು.

ಪ್ರಗತಿಶೀಲ ಯುಗದಲ್ಲಿ ಹುಟ್ಟಿರುವ ಸಾಹಿತ್ಯ ಶಾಶ್ವತವಾಗಿ, ಅವಿನಾಶಿಯಾಗಿ ನಿಲ್ಲುವುದೇ? ಅದಕ್ಕೆ ಹಿಂದಿನದು ಶ್ರೇಷ್ಠ ಸಾಹಿತ್ಯವಾಗ

ದಿದ್ದರೆ ಪ್ರಗತಿಶೀಲ ಸಾಹಿತ್ಯ ಶ್ರೇಷ್ಠ ಸಾಹಿತ್ಯವೇ? ಎಂಬ ಪ್ರಶ್ನೆ ಹಲವು ವಿಚಾರವಂತರನ್ನು ಸೆರೆಹಿಡಿಯಿತು. ಇದು ಏನೋ ಸಾಹಿತ್ಯಜಗತ್ತಿನಲ್ಲಿ ವ್ಯಾಪಿಸುತ್ತಿರುವ ಪಿಡುಗು ಎಂದು ದಿಗ್ಭ್ರಾಂತರಾದ ಕೆಲವರು ಪ್ರಗತಿಶೀಲ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವ ತೊಂದರೆ ತೆಗೆದುಕೊಳ್ಳದೆ ಅದನ್ನು ಜರಿಯುವುದಕ್ಕೆ ಮೊದಲಿಟ್ಟರು. ಕವಿ ಹೇಳಿದಂತೆ ವಿಚಾರ ಹೊಸದಾದಷ್ಟು ಖಂಡನೆ ತೀಕ್ಷ್ಣ ಹಾಗೂ ಪುರಾತನ.

ಪ್ರಗತಿಶೀಲ ಸಾಹಿತ್ಯ ತನ್ನ ಗುರಿಯಲ್ಲಿಟ್ಟುಕೊಂಡಿದ್ದುದನ್ನು ಸಾಧಿಸಿದೆಯೊ ಇಲ್ಲವೊ ಹೇಳಲಾಗುವುದಿಲ್ಲ. ಸಮಕಾಲೀನರಾದ ನಾವು ಹೇಳುವುದಕ್ಕೂ ಸಮರ್ಥರಲ್ಲ. ಈ ಎರಡೂವರೆ ವರ್ಷಗಳ ಅವಧಿಯಲ್ಲಿ ಅದು ತನ್ನ ಉದ್ದೇಶವನ್ನೆಲ್ಲಾ ಸಾಧಿಸಬೇಕೆಂದು ಕೋರುವುದು ನ್ಯಾಯವಲ್ಲ. ಪ್ರಗತಿಶೀಲ ಸಾಹಿತಿಗಳು ಪವಾಡಪುರುಷರಲ್ಲ. ತಾವು ಪವಾಡಪುರುಷರೆಂದು ಹೇಳಿಕೊಳ್ಳುವ ಧಾರ್ಷ್ಟ್ಯವನ್ನು ಅವರು ಎಲ್ಲಿಯೂ ತೋರಿಲ್ಲ.

ಪ್ರಗತಿಶೀಲ ಸಾಹಿತ್ಯದ ಗುರಿಯನ್ನು ಸಂಕ್ಷೇಪವಾಗಿ ಇಲ್ಲಿ ಸೂಚಿಸಬಹುದು. ವಿಚಾರಸರಣಿ ಪರಂಪರೆಯ ಪ್ರಾರಬ್ಧಕ್ಕೆ ಕಟ್ಟುಬೀಳಬಾರದು. ಲೇಖಕ ಸ್ವತಂತ್ರವಾಗಿ ವಿಚಾರಮಾಡಿ ವ್ಯಕ್ತಿ, ಸಮಾಜಗಳ ಸಮಸ್ಯೆಗಳ ಮೇಲೆ ತನ್ನ ಅಭಿಪ್ರಾಯವನ್ನು ಮಂಡಿಸಬೇಕು. ಮುಸ್ಲಿಮ ಧರ್ಮನೇತ್ರರಲ್ಲಿ ಒಂದು ಹಿರಿಯ ನುಡಿಯಿದೆ. ಪರಮ ಗುರುವಿನಿಂದಲೇ ಬಂದ ಕುರಾನ್ ಎಲ್ಲದಕ್ಕೂ ಮೊದಲನೆಯ ಆಧಾರ. ಅದರಲ್ಲಿ ಸಾಕಷ್ಟು ಬೆಳಕು ದೊರೆಯದಿದ್ದರೆ ಗುರು ಮಿತ್ರ ಶಿಷ್ಯ ಬಂಧುಗಳಿಂದ ರಚಿತವಾದ ಹಡೀಸ್ ಎರಡನೆಯ ಆಧಾರ. ಅದರಲ್ಲಿಯೂ ಸಾಕಷ್ಟು ಬೆಳಕು ದೊರೆಯದಿದ್ದರೆ ಜಿಜ್ಞಾಸು ತನ್ನ ಆತ್ಮಾನುಭವದ ಬೆಳಕಿನ ಮರೆಹೋಗಬೇಕು. ಉಪನಿಷತ್ತಿನ ನಿತ್ಯವಾಣಿಯೂ ಇದೇ ಆಗಿದೆ. ಚಿರ ವಿನೂತನವಾಗಿರುವ ಈ ನಿತ್ಯತತ್ವವನ್ನೇ ಪ್ರಗತಿಶೀಲರು ಒತ್ತಿ ಹೇಳಿದರು. ಈ ದೃಷ್ಟಿಯಿಂದ ಹೆಣ್ಣು, ನೀತಿ, ಮತ, ಆಚಾರ ವಿಚಾರಗಳ ಬಗ್ಗೆ ತಾವು ತಳೆದಿದ್ದ ಧೋರಣೆಯನ್ನು ಪುನರ್ವಿಮರ್ಶಿಸಿ, ಕೆಲವು ಸಲ ಬದಲಾಯಿಸಬೇಕಾದ ಪ್ರಮೇಯ ವೊದಗಿತು.

ಸಾಹಿತ್ಯ ಎಲ್ಲರ ಜೀವನಕ್ಕೂ ಗಾಳಿ, ಬೆಳಕು, ಆಹಾರ, ನಿದ್ರೆಗಳಷ್ಟೇ ಮುಖ್ಯವಾದುದು ಎನ್ನುವ ವಿಚಾರ ಮನುಷ್ಯ ಓದಿ ಬರೆಯುವದಕ್ಕೆ ಕಲಿತಂದಿನಿಂದ ಬಂದಿತು. ಮುದ್ರಣ ಸೌಲಭ್ಯ ಇದಕ್ಕೆ ಇಂಬುಕೊಟ್ಟಿತು. ಇಪ್ಪತ್ತನೆಯ ಶತಮಾನದಲ್ಲಿ ಸಾರ್ವಜನಿಕ ಶಿಕ್ಷಣ ವಾಹಕವಾಗಿರುವ ವೃತ್ತಪತ್ರಿಕೆಗಳು ವಿಶೇಷ ಸಂವೇಗವನ್ನಿತ್ತವು. ಹೊಸ ಜಗತ್ತಿನ ನಿರ್ಮಾಣದ ಮಾತು ಎಲ್ಲೆಲ್ಲಿಯೂ ವ್ಯಾಪಿಸಿರುವಾಗ ಜ್ಞಾನದ ಬೆಳಕನ್ನು ಒಂದು ನಾಡಿನಿಂದ, ಒಂದು ಜನಾಂಗದಿಂದ, ಒಂದು ಮತದಿಂದ ಮುಚ್ಚಿಡಲು ಸಾಧ್ಯವಿಲ್ಲ. ಗಾಳಿ, ಬೆಳಕು ಹೇಗೆ ಪ್ರತಿ ಮಾನವನ ಜನ್ಮಸಿದ್ಧ ಹಕ್ಕೋ ಹಾಗೆ ವಿದ್ಯೆಯೂ ಪ್ರತಿಯೊಬ್ಬನ ಜನ್ಮಸಿದ್ಧ ಹಕ್ಕು. ಜ್ಞಾನ ಪ್ರಸಾರ ಮಾಡುತ್ತೇನೆಂದು ಸಾಹಿತಿ ಸಾಮಾನ್ಯನ ಮಟ್ಟಕ್ಕಿಳಿದು ತನ್ನ ಅವನತಿಯನ್ನುಂಟು ಮಾಡಿಕೊಳ್ಳಬೇಕೆಂದಲ್ಲ—ಸಾಮಾನ್ಯನನ್ನು ತನ್ನ ಮಟ್ಟಕ್ಕೆತ್ತಬೇಕೆಂಬುದೇ ಈ ತತ್ವದ ಘನೋದ್ದೇಶ. ಭವ್ಯವಾದ ವಿಷಯವನ್ನೂ ಜನಸಾಮಾನ್ಯಕ್ಕೆ ತಿಳಿಯುವ ರೀತಿಯಲ್ಲಿ ಹೇಳಬೇಕು. ಜನಸಾಮಾನ್ಯ ತನ್ನ ನೈಚ್ಯಾನುಸಂಧಾನವನ್ನು ಹೊರದೂಡಿ ತಿಳಿದವರ ಸರಿದೊರೆಯಾಗಿ ಮೆರೆಯಬೇಕು.

ಈ ಕಸೋಟಿಯ ಮೇಲೆ ಪ್ರಗತಿಶೀಲ ಸಾಹಿತ್ಯವನ್ನು ಉಜ್ಜಿನೋಡಿ ನಿರ್ಧಾರಕ್ಕೆ ಬರುವ ಕೆಲಸವನ್ನು ಕನ್ನಡ ಜನತೆಗೆ ಬಿಟ್ಟಿದ್ದೇನೆ. 'ರೂಪಸಿ' ಗ್ರಂಥವನ್ನು ಈ ಮಾನದಂಡದಿಂದ ಅಳೆದು ನೋಡುವ ಕಾರ್ಯಭಾರವೂ ಅವರದೇ ಆಗಿದೆ.

'ರೂಪಸಿ' ಬರೆದಿರುವ ತ. ರಾ. ಸುಬ್ಬರಾಯರು ಕನ್ನಡಿಗರಿಗೆ ಹೊಸಬರಲ್ಲ. ಆದರೆ ಕನ್ನಡ ಕಥಾಸಾಹಿತ್ಯಕ್ಕೆ ಹೊಸಬರು. ಇವರ ಲೇಖನಗಳನ್ನು ಪತ್ರಿಕೆಗಳಲ್ಲಿ ಓದಿ ಅವುಗಳ ವಿಷಯ ಸಂಗ್ರಹಣ, ನಿರೂಪಣ ವೈಖರಿಗಳನ್ನು ಜನ ಮೆಚ್ಚಿಕೊಂಡಿದ್ದಾರೆ. 'ಗಾಂಧೀ ಸಾಹಿತ್ಯ'ದ ಅನುವಾದದಲ್ಲಿ ತ. ರಾ. ಸು. ಹೆಸರಾಗಿದ್ದಾರೆ. ಇವರ ಕಾದಂಬರಿ 'ಮನೆಗೆ ಬಂದ ಮಹಾಲಕ್ಷ್ಮಿ' ಕನ್ನಡ ಓದುಗರಲ್ಲಿ ವಿಮರ್ಶಕರಲ್ಲಿ ಗೊಂದಲವೆಬ್ಬಿಸಿ ಕೀರ್ತಿಗೊಂಡಿದೆ. ತ್ರಿಕರಣಪೂರ್ವಕವಾಗಿ ಕನ್ನಡ ಜನತೆಯ ಸೇವೆಯನ್ನು ಮಾಡಬೇಕೆಂದು ಬಯಸುವ ಕನ್ನಡ ತರುಣರಲ್ಲಿ ತ. ರಾ. ಸು. ಅವರೊಬ್ಬರು. ಜೀವನವನ್ನು ಎದುರಿಸುವ ಕೆಚ್ಚು, ಅರ್ಥಮಾಡಿಕೊಳ್ಳುವ

ಸಾಮರ್ಥ್ಯ ಎರಡೂ ಇವರಲ್ಲಿವೆ. ವಯೋಧರ್ಮ ಮೀರಿದ ಅನುಭವವಿಲ್ಲದಿದ್ದರೂ ಸಾಕಷ್ಟು ಕಾವು ಇದೆ. ತಮ್ಮ ವಿಚಾರಗಳನ್ನೊಪ್ಪದಿದ್ದವರನ್ನೂ ಓದಿಸಿಕೊಳ್ಳುವ ಜಾಣ್ಮೆ ಇವರ ಕೃತಿಗಳಲ್ಲಿವೆ. ಇತ್ತೀಚಿನ ತರುಣ ಲೇಖಕರಲ್ಲಿ ಸಾಮಾನ್ಯವಾಗಿ ಕಂಡುಬರದ ಒಂದು ವೈಯುಕ್ತಿಕ ಶೈಲಿಯನ್ನು ತ. ರಾ. ಸು ದೊರಕಿಸಿಕೊಂಡಿದ್ದಾರೆ.

'ರೂಪಸಿ' ಐದು ಕಥೆಗಳ ಸಂಕಲನ. ಪ್ರಕಾಶಕರು ಸೂಚಿಸುವಂತೆ ಪ್ರೇಮ, ಪ್ರಣಯಗಳಿಗೆ ಸಂಬಂಧಪಟ್ಟ ವಸ್ತುಗಳು.. ಜೀವನದ– ಅದರಲ್ಲಿಯೂ ಗಂಡು ಹೆಣ್ಣಿನ ಸಂಬಂಧದ ಕೆಲವು ಸೂಕ್ಷ್ಮಲಹರಿಗಳನ್ನೆತ್ತಿಕೊಂಡು ತ. ರಾ. ಸು. ಈ ಕಥೆಗಳನ್ನು ಬರೆದಿದ್ದಾರೆ. 'ರೂಪಸಿ' ಕಥೆಯಲ್ಲಿ ದೊರಕಿದ ಹೆಣ್ಣನ್ನು ಕೂಡಿ ಬಾಳಲಾಗದ ಒಂದು ಚಿತ್ರ; 'ಏಕೆ ಬರಲಿಲ್ಲ' ಕಥೆಯಲ್ಲಿ ಗಂಡಿನ ಕಠೋರ ವ್ರತಕ್ಕೆ ಸರಿದೂಗಲಾರದೆ ಅವನಿಂದ ಪರಿತ್ಯಕ್ತಳಾದ ಹೆಣ್ಣಿನ ಚಿತ್ರ; 'ಗೆಲುವಿನ ಸೋಲಿ' ನಲ್ಲಿ ಹೆಣ್ಣು ಭೋಗದ ವಸ್ತುವೆಂದು ಭಾವಿಸಿ ಅವಳನ್ನು ಚಿರದಾಸ್ಯದಲ್ಲಿ ದೂಡಲು ಮನಸ್ಸುಮಾಡಿದ್ದ ಒಬ್ಬ ಭೋಗಿಯ ಪರಾಜಯದ ಚಿತ್ರ; 'ಮೂರು ನಗುವಿ'ನಲ್ಲಿ ಸಹಿಷ್ಣುತಾಮೂರ್ತಿಯಾದ ಹೆಣ್ಣು ತನ್ನ ಕ್ಷಮೆ, ದಮೆ, ಶಾಂತಿಗಳಿಂದ ಗಂಡನನ್ನು ದೇವರನ್ನಾಗಿ ರೂಪಿಸಿದ ಚಿತ್ರ; 'ಸಾಕ್ಷಾತ್ಕಾರ' ದಲ್ಲಿ ಹೆಣ್ಣಿನ ನಿಸ್ಸೀಮತ್ಯಾಗದಿಂದ ಪುನರ್ಜನ್ಮ ಪಡೆದ ಒಬ್ಬ ಪಾಪಿಯ ಚಿತ್ರ ರೂಪಿಸಲ್ಪಟ್ಟಿವೆ. ಹೆಣ್ಣಿನ ಹಾವಭಾವ, ಹಾಸವಿಲಾಸಗಳನ್ನು ಚಿತ್ರಿಸುವುದರಲ್ಲಿ ತ. ರಾ. ಸು. ಅವರ ಲೇಖನಿ ಸ್ವಚ್ಛಂದವಾಗಿ ಹರಿದಿದೆ. ಆದರೆ ಆಕೆಯ ನೈರ್ಮಲ್ಯ, ತ್ಯಾಗ, ಅಂತಃಕರಣಗಳನ್ನೂ ತ.ರಾ.ಸು. ಮರೆತಿಲ್ಲ. ಗೌಣವೆಂದು ಭಾವಿಸಿಲ್ಲ. ಆಕೆಯ ಶೃಂಗಾರ, ಸೌಂದರ್ಯಗಳನ್ನು ನೋಡಿ ಮರುಳಾಗುವ ಕಥೆಗಾರ ಆಕೆಯ ಅನಂತ ಸಮಸ್ಯೆಗಳ ಬಗ್ಗೆ ಅನುಕಂಪ ತಾಳುತ್ತಾನೆ. ಆಕೆಯ ಪುಣ್ಯ ಪ್ರಭಾವಕ್ಕೆ ತಲೆಬಾಗುವ ಕಲಾವಿದ, ಆಕೆಯ ಪಾಪಜೀವನವನ್ನು ಕನಿಕರದಿಂದ ಆರ್ದ್ರತೆಯಿಂದ ನೋಡುತ್ತಾನೆ.

ಕಲಾದೃಷ್ಟಿಯಿಂದ 'ಸಾಕ್ಷಾತ್ಕಾರ' ತುಂಬಿದ ಕಥೆ. ವಸ್ತು, ಬೆಳವಣಿಗೆ, ಶೈಲಿ ಎಲ್ಲ ಇದರಲ್ಲಿ ಪಕ್ವವಾಗಿವೆ. ನಾಯಕನ ಉತ್ಕಟ ಪ್ರಣಯದ ಒಂದು ನಿಮಿಷಗಳಿಗೆಯಲ್ಲಿ ಲಲಿತಾ ಅವನ ಪತಂಗವಾಗುತ್ತಾಳೆ.

ಲಲಿತಾ ಪತಂಗ ಜಾತಿಯ ಹೆಣ್ಣಲ್ಲ. ಅವಳ ಸಂಯಮ, ಪವಿತ್ರಪ್ರೇಮ ಬಹಳ ಮೇಲುಮಟ್ಟದ್ದು. ಆ 'ಗಳಿಗೆ' ಅವಳು ಪಾರಾಗಿದ್ದರೆ ಚೆನ್ನಾಗಿರುತ್ತಿತ್ತು, ಅದರಿಂದ ಅವಳ ವ್ಯಕ್ತಿತ್ವ ಹೆಚ್ಚಿನ ಮಟ್ಟದಲ್ಲಿ ನಿಲ್ಲುತ್ತಿತ್ತು ಎಂದು ನನ್ನ ಅಭಿಪ್ರಾಯ. ಮೂರು ನಗು ಕಥೆ ಅಸ್ಪಷ್ಟ. ಮೂರು ನಗು, ಸಾಕ್ಷಾತ್ಕಾರ, ಗೆಲುವಿನ ಸೋಲುಗಳಲ್ಲಿ ಒಂದೇ ಬಗೆಯ ನಾಂದಿಯಿದೆ. ಹಲವು ಹೆಣ್ಣುಗಳನ್ನು ಕಂಡು, ಒಂದು ಹೆಣ್ಣಿನಲ್ಲಿ ವಿಶೇಷಾನುಭವ ಪಡೆಯುವ ಜೀವಿಯ ಚಿತ್ರ. ಪುನರುಕ್ತಿಯಿಂದ ಕಲೆಯ ಕಟ್ಟು ಸಡಿಲವಾಗುತ್ತದೆ.

'ರೂಪಸಿ'ಯಲ್ಲಿ 'ಹೂ – ಹಾ – ಝುಯ್ – ಗಮ್ಮೆಂದು ಬಂತು ಹೂಗಂಪು – ಹ್ಹೊ ಹ್ಹೊ ಹ್ಹೊ – ಮೊದಲಾದ ಅನುಕರಣ ಶಬ್ದಗಳು ತುಂಬಿವೆ. ರಸಾವೇಶವನ್ನು ತೋರುವೆಡೆಗಳಲ್ಲಿ ಧಾರಾಳವಾಗಿ ಉದ್ಗಾರಗಳು ತಲೆಹಾಕಿವೆ. ಶೈಲಿ ಕೆಲವು ಕಡೆ ಅಲಂಕಾರಿಕವಾಗಿ ತನ್ನ ಸರಳತೆಯನ್ನೂ ಪ್ರಖರತೆಯನ್ನೂ ಕಳೆದುಕೊಳ್ಳುತ್ತದೆ. ಶಬ್ದಸೌಂದರ್ಯಕ್ಕೆ ಮನಸೋಲುವ ಲೇಖಕ ಅದು ಶಬ್ದಜಾಲವೆಂಬ ಭಾವನೆ ಬರದಂತೆ ಸಾಗಬೇಕು. ಕಥೆಗಳು ಕೆಲವುಕಡೆ ಅತಿಶಬ್ದ ಪ್ರಯೋಗ, ಕಥಾಂತರ ವ್ಯಾಖ್ಯಾನಗಳಿಂದ ರಸಭಂಗ ಪಡೆಯುತ್ತವೆ. ಇವುಗಳನ್ನು ಮುಂದೆ ತ. ರಾ. ಸು. ತಿದ್ದಿಕೊಳ್ಳುವರೆಂಬ ಭರವಸೆ ನನಗಿದೆ.

'ರೂಪಸಿ'ಯಿಂದ ತ. ರಾ. ಸು. ನಮ್ಮ ನಾಡಿನ ಉತ್ತಮ ಕಥೆಗಾರರಲ್ಲಿ ಸ್ಥಾನ ದೊರಕಿಸಿಕೊಂಡಿದ್ದಾರೆ. ಇದಕ್ಕೂ ಉತ್ತಮ ಕಥೆಗಳನ್ನು ಬರೆಯುವ ಯೋಗ್ಯತೆ ಇವರಲ್ಲಿದೆಯೆಂದು ನನ್ನ ದೃಢ ವಿಶ್ವಾಸ. ಅವರ "ರೂಪಸಿ" ಕಥಾ ಸಂಗ್ರಹವನ್ನು ಕನ್ನಡಿಗರು ಆದರದಿಂದ ಓದಿ, ತ. ರಾ. ಸು ಅವರಿಂದ ಇನ್ನೂ ಒಳ್ಳೆಯ ಕೃತಿ ಬರಲು ನೆರವಾಗುವರೆಂದು ನಂಬಿದ್ದೇನೆ.

ಅನ್ನಪೂರ್ಣ
ವಿಶ್ವೇಶ್ವಪುರಂ, ಬೆಂಗಳೂರು
೧೪-೬-೧೯೪೭

# ಕಥಾರಂಭದಲ್ಲಿ –

ಮಾನವನ ಹೃದಯವನ್ನು ಅಲ್ಲಕಲ್ಲೋಲ ಮಾಡುವ ಪ್ರಬಲ ರಾಗ-ಭಾವಗಳಲ್ಲಿ ಪ್ರೇಮ-ಕಾಮಗಳು ಪ್ರಧಾನ ಸ್ಥಾನ ಪಡೆದಿವೆ. ಎಷ್ಟೋ ವೇಳೆ ಹಲವರ ಜೀವನ ದುರಂತವಾಗಲು, ಸುಖಾಂತವಾಗಲು ಇವು ಕಾರಣವಾಗಿವೆ. ಇವೇ ಹೆಣ್ಣು-ಗಂಡಿನ ಜೀವನವನ್ನು ಹಾಸುಹೊಕ್ಕಾಗಿ ಹೆಣೆದಿರುವ ರಸಸೂತ್ರಗಳು. ಯಾವ ಕಾಲಕ್ಕೆ ಇವು ಯಾವ ರೂಪದಿಂದ ಯಾವ ಪ್ರೇರೇಪಣೆಯಿಂದ ಆವಿರ್ಭವಿಸಿ, ಹೇಗೆ ಪರಿಣಾಮ ಮಾಡುತ್ತವೆಯೆಂದು ಹೇಳುವುದು ದುಸ್ಸಾಧ್ಯ. ಎಂತಲೇ ಅದೊಂದು ಮಹಾ ಸಮಸ್ಯೆ; ಮೂಲಭೂತ ಸಮಸ್ಯೆ.

ಈ ಸಮಸ್ಯೆಯ ಚಿಂತನೆಯ ಪರಿಣಾಮವೇ ಇಲ್ಲಿ ಐದು ಕಥೆಗಳಾಗಿ ರೂಪುಗೊಂಡಿವೆ. ಇವನ್ನು ಚಿತ್ರಿಸುವಲ್ಲಿ ಸಂಪ್ರದಾಯಶೀಲತೆಗೆ ಕಟ್ಟುಬಿದ್ದು ವಾಸ್ತವಿಕತೆಗೆ ಮೋಸಮಾಡಲು ಯತ್ನಿಸಿಲ್ಲ. ಇದರಿಂದಾಗಿಯೇ ಒಂದೆರಡು ಕಥೆ ಮೊದಲು ಪತ್ರಿಕೆಗಳಲ್ಲಿ ಅಚ್ಚಾದಾಗ ಅಶ್ಲೀಲದ ಅಪವಾದಕ್ಕೂ ಗುರಿಯಾಗಬೇಕಾಯಿತು. ಅಶ್ಲೀಲವೆನ್ನುವುದು ವಾಚಕರ, ವಿಮರ್ಶಕರ ನೋಟವನ್ನು ಅವಲಂಬಿಸಿದ ಮಾತು. ಆ ಬಗ್ಗೆ ನಾ ಏನೂ ಹೇಳಬಯಸುವುದಿಲ್ಲ.

ಇಲ್ಲಿಯ ಐದು ಕಥೆಗಳಲ್ಲಿ ಎರಡು – 'ಏಕೆ ಬರಲಿಲ್ಲ', 'ಗೆಲುವಿನ ಸೋಲು' ಹಿಂದೆ 'ವಾಣಿ' 'ಮಾತೃಭೂಮಿ ವಿಶೇಷ ಸಂಚಿಕೆ'ಗಳಲ್ಲಿ ಅಚ್ಚಾಗಿದ್ದವು. 'ಗೆಲುವಿನ ಸೋಲು'ವಿನ ಅಂತ್ಯವನ್ನು, ಕೆಲವರು ಗೆಳೆಯರ ಸಲಹೆಯಂತೆ ಕೊಂಚ ಬದಲಾಯಿಸಿದೇನೆ; ಅಷ್ಟೆ. 'ರೂಪಸಿ'ಯ ಕಥಾವಸ್ತುವಿಗೆ ನಾನು ಗೆಳೆಯ ಬಿ. ಅಶ್ವತ್ಥನಾರಾಯಣರಾಯರಿಗೆ ಋಣಿ. ಅದು ಅವರ ಗೆಳೆಯರಲ್ಲೊಬ್ಬರಾದ ದಿವಂಗತ ರಾಜಾ ಸ್ಯಾಂಡೋರವರ ಜೀವನಕ್ಕೆ ಸಂಬಂಧಿಸಿದ ಘಟನೆ.

ಈ ಸಂಗ್ರಹ ಪುಸ್ತಕ ರೂಪದಲ್ಲಿ ಬರಲು ನೆರವಾದ ಗೆಳೆಯ ದಾಶರಥಿ ದೀಕ್ಷಿತ್, ಸೋದರ ತ. ವೆಂ. ಅಶ್ವತ್ಥ ಇವರಿಗೂ, ಮುನ್ನುಡಿಯನ್ನು ಬರೆದುಕೊಟ್ಟ ಹಿರಿಯ ಗೆಳೆಯರಾದ ಶ್ರೀ ಅ. ನ. ಕೃಷ್ಣರಾಯರಿಗೂ, ಮುದ್ದಾಗಿ ಮುದ್ರಿಸಿಕೊಟ್ಟ ಗೆಳೆಯ ಚಿಂತಾಮಣಿಯವರಿಗೂ ನನ್ನ ವಂದನೆಗಳು.

ಬೆಂಗಳೂರು, ೨೫-೬-೪೬ **ತ. ರಾ. ಸು.**

## ವಿವರ

★


ರೂಪಸಿ .... ೧

ಏಕೆ ಬರಲಿಲ್ಲ .... ೧೭

ಗೆಲುವಿನ ಸೋಲು .... ೨೭

ಮೂರು ನಗು .... ೩೮

ಸಾಕ್ಷಾತ್ಕಾರ .... ೫೬

# ಅರ್ಪಣೆ

★

ಯಾರ

ಒಲವಿನ ನೆನಪು ನನ್ನ ಬಾಳಿನ

ನಿತ್ಯಸ್ಫೂರ್ತಿಯ ನಂದಾದೀವಿಗೆ

ಆಗಿದೆಯೊ

ಆ

**ತಾಯಿದೇವಿಗೆ**

ಮಮತೆಯ ಮುಡಿಪು

# ರೂಪಸಿ

“ನಿರ್ಭಾಗ್ಯ ನೀನು! ಬೇಡಿದ ವರ ಕರುಣಿಸುತ್ತೇನೆ ಎಂದು ದೇವರು ಹೇಳಿದಾಗ ಮೂರು ಗಳಿಗೆಯ ಸುಖ ಬಯಸಿದವನಂಥ ಮೂರ್ಖ-ಹ್ಹೊ?”

ದೀರ್ಘವಾಗಿ ನಿಟ್ಟುಸಿರಿಟ್ಟು, ಕೂದಲು ಕೆದರಿದ ತಲೆಯನ್ನು ಅತ್ತಿಂದಿತ್ತ ಅಲ್ಲಾಡಿಸುತ್ತಾ, ದುರ್ದಾನ ತೆಗೆದುಕೊಂಡವನಂತೆ ಪೇಲಾಯುಧ ಹೊರಟುಹೋದ. ಪ್ರಶಾಂತ ನಿಶೆಯ ಚಂದ್ರಿಕೆಯಲ್ಲಿ ಅವನ ನೆರಳು ಅವನನ್ನು ಹಿಂಬಾಲಿಸಿತು.

ಬಿರುನೋಟದಲ್ಲಿ ಅವನನ್ನೂ, ಅವನನ್ನು ಹಿಂಬಾಲಿಸಿದ ನೆರಳನ್ನೂ ದಿಟ್ಟಿಸಿ ನೋಡಿದೆ.

ಸಿಧಾನವಾಗಿ ಕೋಣೆಯ ಬಾಗಿಲು ತೆರೆದೆ. ಬಾಗಿಲು ಮುಚ್ಚಿದ ಕೋಣೆಯೊಳಗಡಗಿದ್ದ ನಸು ಬಿಸಿಯಾದ ಇರುಕು ಗಾಳಿ, ಮುಖವನ್ನು ನೇವರಿಸಿತು. ಹ್ಹಾ! ಎಂಥ ಪರಿಮಳ! ಜಾಜಿಯ ಹೂವಿನ ನವಿರಾದ, ಮಾದಕವಾದ ಪರಿಮಳ ಗಾಳಿಯಲ್ಲಿ ತೇಲಿ ಬಂತು. ಮಿದುಳಿಗೆ ಯಾವುದೋ ಮಾಯದ ತೆರೆಯ ಮುಸುಕು ಹಾಕಿದ ಹಾಗಾಯಿತು. ಎಲ್ಲಿಯದು ಈ ಪರಿಮಳ? ಸುತ್ತುಮುತ್ತು ಹತ್ತಾರು ಮನೆಗಳಾಚೆ, ನನಗೆ ಗೊತ್ತಿದ್ದ ಹಾಗೆ ಜಾಜಿಯ ಬಳ್ಳಿ ಎಲ್ಲಿಯೂ ಇರಲಿಲ್ಲ. ಆದರೂ ಚಲಿಸದ ಗಾಳಿಯಲ್ಲಿ ಮತ್ತಷ್ಟು ಭಾರವಾಗಿ ತೇಲುತ್ತಿದೆ ಜಾಜಿಯ ನರುಗಂಪು. ಬಾಗಿಲಿಗೆ ಇದಿರಾಗಿರುವ ಕಿಟಕಿಯ ತೆರೆಯಿಂದಾಚೆ, ಚಂದ್ರಕಾಂತಿ! ಆ ತೆರೆ – ಪರಿಮಳದ ತೆರೆಯೊ! ಚಂದ್ರಕಾಂತಿಗೇ ಜಾಜಿಯ ಮಧುರ ಸುವಾಸನೆ ಮೂಡಿದೆಯೊ. ಗಾಳಿಯ ಮೈಗೇ ಯಾರಾದರೂ ಜಾಜಿಯ ಗಂಧ ಸವರಿ ತೇಲಿಬಿಟ್ಟಿದಾರೊ. ಇಲ್ಲವಾದರೆಲ್ಲಿಯದು ಈ ಪರಿಮಳ? ಅರ್ಥವಾಗದ, ಕಾರಣ ತಿಳಿಯದ

ಪರಿಮಳ ಸಮುಸ್ಯೆ. ಆ ಪರಿಮಳದ ಹಾಗೇ ಎಟುಕದ ಸಮುಸ್ಯೆ. ಆ ಚಂದ್ರ ಕಾಂತಿ, ಜಾಜಿಯ ಮಾದಕವಾದ ನರುಗಂಪು – ಹ್ಞ. ಮುತ್ತಾಳ ವೇಲಾಯುಧ !

ಏಕೋ ದೀಪ ಆರಿಹೋಗಿತ್ತು. ಕೋಣೆಯಲ್ಲಿ ತಿಳಿಗತ್ತಲು, ಪರಿಮಳ ಬೆರೆತ ಕತ್ತಲು. ಜೇಬಿನಲ್ಲಿದ್ದ ಕಡ್ಡಿಪೊಟ್ಟಣ ತೆಗೆದು, ಕಡ್ಡಿಯನ್ನು ಕೊರೆದು, ಬತ್ತಿ ಸಣ್ಣದುಮಾಡಿ, ದೀಪ ಹಚ್ಚಿ, ಅಭ್ಯಾಸ ಬಲದಿಂದ, ಉರಿಯಾರಿಸಿದ ಕಡ್ಡಿಯನ್ನು ಕುಡಿಬೆರಳ ಮೇಲಿಟ್ಟು ಚಿಮ್ಮಿಸಿದೆ.

"ಝುಯ್" ಎಂದಿತು, ಹಾರಿದ ಕಡ್ಡಿ ತಗುಲಿ, ಮೂಲೆಯಲ್ಲಿ ಶೃತಿಮಾಡಿಟ್ಟಿದ್ದ ತಂಬೂರಿಯ ತಂತಿ, ಇನಿದನಿಯ ನಿಟ್ಟುಸಿರಿಟ್ಟು. ಅಲೆಯಲೆಯಾಗಿ ತೇಲಿತು ಆ ಸಣ್ಣ ಸದ್ದು ; ಮೈಯನ್ನು ಯಾರೋ ಮೃದುವಾಗಿ ನೇವರಿಸಿದಂತೆ, ರೋಮಾಂಚನವಾಯಿತು. ಆ ಮಧುರಸ್ವರದ ನವಿರಾದ ಎಳೆ !

ಯಾರೋ ಆವೇಗಭಾರದಿಂದ ನಿಟ್ಟುಸಿರಿಟ್ಟರೇ ? ಇದಾವ ಮಾಧುರ್ಯದ ಮೋಡಿ ? ಮನಸಿಗೇನಾಗುತ್ತಿದೆ ? ಎದೆಯೇಕೆ ಅಕಾರಣವಾಗಿ ತುಯ್ಯುತ್ತಿದೆ ? ಕಿಟಕಿಯಾಚೆಯ ಚಂದ್ರಿಕೆ, ತಿಳಿಗತ್ತಲು, ಪರಿಮಳ, ತಂಬೂರಿಯ ಇಂಚರ – ಬಯಕೆಯ ವೀಣೆಯನ್ನು ಮಿಡಿಯುತ್ತಿದೆ. ಸುತ್ತ ಅತೃಪ್ತಿ ಕೇಳುತ್ತಿದೆ.

ಭಾರವಾದ ಹೆಜ್ಜೆ ಹಾಕುತ್ತ ಸೊಳ್ಳೆ ಪರದೆ ಮುಸುಗಿದ ಹಾಸಿಗೆಯತ್ತ ಹೊರಟೆ. ಮೃದುವಾದರೂ ಬರಿದಾದ ಹಾಸಿಗೆ, ಮನಸಿನೆದಿರು ಮಿಂಚಿತು. ನಿಟ್ಟುಸಿರು ತಾನೆ ಹೊರಬಿತ್ತು.

ಹಾಸಿಗೆ ಹತ್ತಿರವಾದ ಹಾಗೆ ಪರಿಮಳ ಹೆಚ್ಚಾಗುತ್ತಿದೆ ; ಕತ್ತಲೂ ಹೆಚ್ಚು. ಕತ್ತಲಿನ ಕಾಡಿಗೆ ಮೈಗೇ ಪರಿಮಳ ಬಳಿದಿರಬೇಕು.

ತೆರೆದಿದ್ದರೂ ಏನನ್ನೂ ನೋಡಲಾಗದ ಕಣ್ಣು. ಹಾಗೇ ಸೊಳ್ಳೆಪರದೆಯನ್ನು ಪಕ್ಕಕ್ಕೆ ಸರುಗಿಸಿದೆ. ಗಮ್ಮೆಂದು ಬಂತು ಹೂಗಂಪು, ಸೊಳ್ಳೆ ಪರದೆಯನ್ನು ಸರಿಸಿದೊಡನೆ. ಮೈ ಒಮ್ಮೆ ಮಧುರ ರಾಗಾವೇಶಕ್ಕೆ ಝೊಂಪಿಸಿದ ಹಾಗೆ ಕಂಪಿಸಿತು.

ಇಲ್ಲ! ನಾನು ಮಲಗಿಲ್ಲ! ಎಚ್ಚತ್ತಿದೇನೆ, ಮಲಗಿಲ್ಲ. ಮಲಗಲೆಂದೇ

ಬಂದು ಮಂಚದ ಬಳಿ ನಿಂತಿದೇನೆ. ಸರಿಸಿದ ಸೊಳ್ಳೆಪರದೆ ಇನ್ನೂ ಕೈ ಹಿಡಿಯಲ್ಲೇ ಇದೆ.

ಹಾಗಾದರಿದು ಯಾವ ನಂದನದ ಹೂವು ಹಾಸಿಗೆಯ ಮೇಲೆ? ಊಹು. ಹೂವಲ್ಲ, ಹೆಣ್ಣು!

ಮೃದುವಾಗಿ ಮುಚ್ಚಿದ ಕಣ್ಣಿವೆ; ಅರಳಲೋ ಬೇಡವೋ ಎಂದು ಆಟವಾಡುವ ಸಂಪಿಗೆಯ ಮೊಗ್ಗೆಯಂಥ ಮೂಗು; ಮಿಡಿದ ತಂತಿಯಂತೆ ನಸು ಕಂಪಿಸುವ ಕೆಂದುಟಿ; ಹಾಲುಗಲ್ಲಿನಲ್ಲಿ ಕಡೆದ ಕೆನ್ನೆ; ವಿಶಾಲ ಫಾಲ; ನಿದ್ರೆಯಲ್ಲಿ ಕೆದರಿದ ಕೂದಲು; ಯಾವ ಭಾವದ ಉಯ್ಯಾಲೆಯಲ್ಲೋ ಏರಿಳಿವ, ಮೋಡದ ಮರೆಯಲ್ಲಿ ಅರೆಯಡಗಿದ ಚಂದ್ರನಂತೆ, ನಸುಜಾರಿದ ಸೆರಗಿನಂಚಿನಿಂದ ಇಣುಕುವ ಎದೆ.

ಯಾವ ಸ್ವರ್ಗದ ಅಪ್ಸರೆ ಇವಳು, ಮಧುರ ಸ್ವಪ್ನ ವೈದಾಳಿ ಬಂದ ಈ ಹೆಣ್ಣು ಯಾರು?

ನಕ್ಷತ್ರದ ಹೂವು ಅರಳಿತೆ, ಮಂಚದ ಮಡಿಲಿನಲ್ಲಿ. ಅಲ್ಲ. ಅಲ್ಲ, ಅರೆಗಣ್ಣು ತೆರೆದು ನೋಡುತ್ತಿದಾಳೆ, ನನ್ನ ಮುಖವನ್ನೇ. ಅದರಮೇಲೆ ಕಣ್ಣ ಹೊಳಪು ಚೆಲ್ಲಿ ದಿಟ್ಟಿಸುತ್ತಿದಾಳೆ. ಮೆತ್ತಗೆ ಹಿಸುಗಿದ ದ್ರಾಕ್ಷಿಯಿಂದ ಮಧುರ ರಸ ಒಸರಿದಂತೆ, ಕಿರುನಗೆ ಸೂಸುತ್ತಿದೆ ಆ ತುಟಿಯಿಂದ. ರಾಗಪ್ರಮತ್ತ ಮಂದಹಾಸ, ಉದ್ದೀಪ್ತ ನಯನಕಾಂತಿ.

ಊಹು! ನಾನು ಮಲಗಿಲ್ಲ, ಎಚ್ಚರವಾಗಿದೇನೆ. ಅದು ಪರಿಮಳ, ಮೋಡಿಯಲ್ಲ. ಅದು ಬೆಳದಿಂಗಳು, ನಂದನವಲ್ಲ.......

'ಯಾರು ನೀನು?'

ನಿಜ. ನಾನು ಎಚ್ಚರವಾಗಿದೇನೆ. ನನ್ನ ಧ್ವನಿ ನನಗೇ ಕೇಳುತ್ತಿದೆ. ಅದು ನನ್ನದೇ ಧ್ವನಿ. ನಾನೇ ಮಾತಾಡುತ್ತಿದೇನೆ. ಮೈಯಂತೆ ಮಾತೂ ಕಂಪಿಸುತ್ತಿದೆ. ಆದರೂ ಅದು ನನ್ನದೇ ಧ್ವನಿ!

ಉತ್ತರವಿಲ್ಲ. ಬರೀ ಮಂದಹಾಸ, ಕಳೆಯೇರಿದ ನಕ್ಷತ್ರಕಾಂತಿ.

'ಹೇಳು ನೀನು ಯಾರು?'

ನೀರವತೆ ಎದೆಯನ್ನೇ ಕಲಕುತ್ತಿದೆ; ಸುಗಂಧ ಮೆದುಳನ್ನು ಕವಿಯುತ್ತಿದೆ.

‘ ಹೇಳು, ಹೇಳು, ನೀನಾರು ? ’

‘ ನಾನಾರು ಗೊತ್ತಿಲ್ಲವೇ? ಬಾರೆಂದು ಕರೆದ ನಿನಗೇ ನನ್ನ ನೆನಪಿಲ್ಲವೇ ? ’

ವೀಣೆಯನ್ನಾರೂ ಮಿಡಿಯುತ್ತಿಲ್ಲ, ಅವಳು ಮಾತಾಡುತ್ತಿದ್ದಾಳೆ. ಮಾತಾಡಲೆಂದೇ ಅವಳು ಅರೆ ಎದ್ದು ಕುಳಿತಿದಾಳೆ. ಹಾಸಿಗೆಯನ್ನೂರಿದ ತೋಳು, ಬಾಗಿದ ಮೈ, ಏರಿಳಿವ ಅಂಗರೇಖೆ, ಕಿರುನಗೆ ಸೂಸುವ, ಕೆಣಕುವ ತುಟಿ.

‘ ನಾನೇ ಕರೆದೆನೆ ನಿನ್ನ? ಬಾರೆಂದು ಕರೆದೆನೆ ? ’

ನನ್ನ ಮೆದುಳನ್ನು ಹಿಡಿದು ಯಾರೋ ಚೆಂಡಾಟವಾಡುತ್ತಿದ್ದಾರೆ ; ದಿಕ್ಕು ದಿಕ್ಕಿಗೆ ತೂರುತ್ತಿದ್ದಾರೆ. ಪುಟ ಹೊಡೆದು, ಚಿಮ್ಮಿ ನೆಗೆದು ಹಾರಾಡುತ್ತಿದೆ ಮನಸು.

‘ ಒಂದು ಗಳಿಗೆಯ ಹಿಂದಾದುದೂ ನೆನಪಿಲ್ಲವೇ ? ’

ಒಂದೇ ಗಳಿಗೆಯೇ ? ಯುಗ ಯುಗನೇ ಉರುಳುತ್ತಿದೆ.

‘ ಊಹೂ. ನನಗೆ ನೆನಪಿಲ್ಲ. ನೀನೇ ಹೇಳು. ಯಾರು ನೀನು ? ’

‘ ನಾನೇ. ನೀನು ಬಯಸಿದ ಹೆಣ್ಣು.’

‘ ನೀನು – ನಾನು ಬಯಸಿದ ಹೆಣ್ಣು. ಊಹೂ, ನನ್ನ ಬುದ್ಧಿಗೇನೋ ಮೋಡಿ ಮಾಡುತ್ತಿದೀಯ.’

ವಜ್ರರಸದ ಕಾರಂಜಿ ಚಿಲಚಿಲ ಚಿಮ್ಮಿತು. ಅಲ್ಲ. ಅವಳು ನಗುತ್ತಿದಾಳೆ. ಮೃದುವಾಗಿ, ಮಾದಕವಾಗಿ, ವೀಣೆಯ ಮನೆಯಮೇಲೆ ಬೆರಳೋಡಿಸಿದಂತೆ, ತಡೆತಡೆದು, ಹೊಳೆಹೊಳೆದು ಅವಳ ಹೃದಯದಿಂದ ಚಿಮ್ಮಿ ಬರುತ್ತಿದೆ ಕುಲುಕು ನಗು.

‘ ನಗಬೇಡ. ನೀನಾರು ಹೇಳು ? ’

‘ ನಾನು ಯಾರಾದರೇನು, ನಿನಗೆ ಬೇಕಾದ್ದು ನಾನು.’

‘ ನಿನ್ನ ಹೆಸರೇನು ? ಯಾರ ಮನೆಯವಳು ನೀನು ? ಇಲ್ಲಿಗೇಕೆ ಬಂದೆ ? ’

‘ ನಾನೆ, ಯಾರ ಮನೆಯವಳೂ ಅಲ್ಲ, ಈಗ ನಿನ್ನವಳು. ನೀ ಕರೆದೆ, ನಾ ಬಂದೆ.’

' ಮತ್ತೆ ಅದೇ ಒಗಟು. ನಿನ್ನ ಹೆಸರೇನು ? '

' ರೂಪ — ಅಸಿ '

' ಆ '

' ರೂಪಸಿ '

ಸಪ್ತ ಮಧುರ ಸ್ವರಗಳನ್ನು ಮೂರಕ್ಷರದಲ್ಲಿ ನೆಯ್ದ ಹೆಸರು !

' ರೂಪಸಿ — ನೀನು ರೂಪಸಿಯೇ ! '

ಮತ್ತೆ ಆ ಮಾದಕವಾದ ನಗು.

' ಇರಲಿ ಬಿಡು. ಬಾ. ಚಂದ್ರಿಕೆ ವ್ಯರ್ಥವಾಗುತ್ತಿದೆ.'

ಹೆಗಲಮೇಲೆ ಹೂಮಾಲೆ ಹಾಕಿದಂತೆ ಅವಳ ತೋಳು. ಸವಿಸುಖದ ಕಲ್ಪನೆಯಂತೆ ಬೆಚ್ಚಗಿದೆ ಅವಳ ಸ್ಪರ್ಶ. ಯಾವುದೋ ರಾಗ ಬಿಡುವಿಲ್ಲದೆ, ಗಳಿಗೆ ಗಳಿಗೆಗೆ ವೇಗವೇಗವಾಗಿ ಏರುತ್ತಿದೆ ಎದೆಯಲ್ಲಿ.

ಅರಿವಾಗದಂತೆಯೇ, ಕೈ ಅವಳ ಬೆನ್ನನ್ನು ನೇವರಿಸುತ್ತಿದೆ ; ಹಕ್ಕಿಯ ಪಮುಳ ಪುಕ್ಕದ ಮೃದುತೆ.

ಬೀಸುಗಾಳಿಯಲ್ಲಿ ತೇಲಿದ ಹೂ ಎಸಳಿನಂತೆ, ತೂಗಿಬಿದ್ದಳು ಅವಳೆನ್ನ ತೋಳತೆಕ್ಕೆಯಲ್ಲಿ.

ಮೃದುವಾಗಿ, ಬಿಗಿಯಾಗಿ — ಮಧುರ ಭಾವ ಬಂಧನದಂತೆ ಬಿಗಿಯುತ್ತಿದೆ ಅವಳ ತೋಳು. ಅವ್ಯಕ್ತ ಶಾಖಕ್ಕೆ ಎದೆ ಕರಗಿಹೋಗುತ್ತಿದೆ, ಮೈ ಮೇಣವಾಗುತ್ತಿದೆ. ಪರಿಮಳದ ತೆರೆ ನಮ್ಮಿಬ್ಬರನ್ನೂ ಮುಸುಗುತ್ತಿದೆ. ದ್ರಾಕ್ಷಾರಸ ಕುಡಿದಂತೆ ಕಾವೇರುತ್ತಿದೆ. ಸುತ್ತೆಲ್ಲಾ ಬರೀ ಮಂಜು, ಪರಿಮಳದ ಮಂಜು.

' ಈಗ ಹೇಳು ನಾನಾರು ಗೊತ್ತಾಯಿತೇ ? '

ಊಹೂ ಇಲ್ಲ. ಬುದ್ಧಿ ಇದ್ದರೆ ತಾನೆ ತಿಳಿವು ?

' ನಿನ್ನನ್ನು ಯಾರು ಕಳಿಸಿದರು ? '

' ಹೇಳಬೇಕೇ ? ಹೇಳಲೇಬೇಕೆ ? ಬೇಡ ಬಿಡು ! ಅದು ಸುಖಕ್ಕೆ ಸಾಧಕವಲ್ಲ, ಯಾರು ಕಳಿಸಿದರೇನು, ನಿನಗೆ ಬೇಕಾದವಳು ನಾನು. ಬಾ.'

ಮೃದುವಾದ, ಬಿಸಿಯಾದ ಎದೆ ಕೆನ್ನೆಯನ್ನು ಒತ್ತುತ್ತಿದೆ. ಕೈಬೆರಳು ಕೂದಲಿನಲ್ಲಾಡುತ್ತಿದೆ.

'ನನ್ನ ಪ್ರಶ್ನೆ ಯಾವುದಕ್ಕೂ ನೀನು ಉತ್ತರ ಕೊಡುವುದಿಲ್ಲ.'

'ಅಗತ್ಯವಿಲ್ಲದ ಪ್ರಶ್ನೆಗೂ ಉತ್ತರ ಕೊಡಬೇಕೇ? ನಿನ್ನ ವ್ಯರ್ಥ ಪ್ರಶ್ನೆಯಲ್ಲೇ ಇರುಳು ಕಳೆಯಬೇಕೇ?'

ತೋಳು ಹಿಡಿದು, ಎದೆಯಮೇಲೆ ಎಳೆದುಕೊಂಡಳು. ಮುಂಜಾವದ ಗಾಳಿಯಂತೆ ಅವಳ ಉಸಿರು ಕೆನ್ನೆಯನ್ನು ಸೋಕುತ್ತಿದೆ. ಯಾವುದೋ ರಾಗದ ಕೈ ಶ್ರುತಿ ಮಾಡುತ್ತಿರುವಂತೆ ಅವಳ ಮೈ ಬಿಗಿಯುತ್ತಿದೆ, ಬಿಸಿಯಾಗುತ್ತಿದೆ, ಬಿರುಸಾಗುತ್ತಿದೆ. ಎದೆಯ ಕಂದರದಲ್ಲಿ ತಲೆಯನ್ನು ಬಿಗಿಯುತ್ತಿದಾಳೆ. ಮೈಯ ಪರಿಮಳವೂ ಮಾದಕವೇ.

ಕೊಡವಿಕೊಂಡು ಮೇಲೆದ್ದೆ. ಹಾಗೇ ಮಲಗಿದಾಳೆ. ಮಿಡಿಯುವ ಬೆರಳಿಗಾಗಿ ಕಾದ ಶ್ರುತಿಮಾಡಿಟ್ಟ ತಂಬೂರಿಯಂತೆ ಮಲಗಿದಾಳೆ; ಅರಳಲು ಮುಂಬೆಳಗಿನ ಗಾಳಿಯ ಮೃದು ಸ್ಪರ್ಶಕ್ಕೆ ಕಾದ ಹೂ ಮೊಗ್ಗೆಯಂತೆ.

ಅವಳ ಕೈಯನ್ನು ಬಿಗಿಯಾಗಿ ಹಿಡಿದು ಕೇಳಿದೆ—

'ನಿಜವಾಗಿ ಹೇಳು. ನಾನು ಎಚ್ಚರವಾಗಿದೇನೆಯೊ, ಇದೇನು ಕನಸೊ?'

'ಹೇಳಲೇಬೇಕೇ?'

'ಹೂ. ಹೇಳು. ನನ್ನೆದೆ ಸಿಡಿಯುತ್ತಿದೆ.'

'ಈಗ ನಿನ್ನ ಮನಸಿಗೆ ಹಿತವಾಗಿಲ್ಲವೇ? ಇದೇನು ಹಟ.'

'ಅದಿರಲಿ, ನನ್ನ ಪ್ರಶ್ನೆಗೆ ಉತ್ತರ ಕೊಡು. ನೋಡು ರೂಪಸಿ. ನನಗೆ ಹುಚ್ಚು ಹಿಡಿಯುತ್ತಿದೆ. ಇದೇನು ಭ್ರಮೆಯೊ, ನಿಜವೊ ಹೇಳು.'

'ಬ್ಬಾ! ಏನು ಹಟ? ಕೂತುಕೋ ಹೇಳುತ್ತೇನೆ. ಹತ್ತಿರ ಬಾ. ಒರಗಿಕೊ. ಹೀಗೆ ತಿರುಗು. ನನ್ನ ಮುಖವನ್ನೇ ನೋಡು. ಈಗ ಹೇಳು — ಹೇಳಲೇಬೇಕೇ?'

ಮೃದುವಾದ ಕೈಯಲ್ಲಿ ಹೂವಿನಂತೆ ನನ್ನ ಮುಖ ಹಿಡಿದು ಕೇಳಿದಳು.

'ಹೇಳಿಬಿಡು, ರೂಪಸೀ ಹೇಳಿಬಿಡು. ಇದು ನಿಜವಾಗಲಾರದ ಕನಸೆಂದು ಹೇಳು.'

ಇದ್ದಕ್ಕಿದ್ದ ಹಾಗೇ ಮೈಯಲ್ಲಿ ಮಿಂಚೋಡಿತು; ವಿದ್ಯುತ್ ಸ್ಪರ್ಶವಾಯಿತು. ತುಟಿಗೆ ತುಟಿಯೂರಿ, ಮೆಲ್ಲಗೆ ತುಟಿಯನ್ನು ಕಡಿದಳು — ಎದೆಗೆ ಎದೆಬಿಗಿದು, ತೋಳನ್ನು ಕತ್ತಿಗೆ ಕಟ್ಟಿಕೊಂಡು.

'ಹ್ಹಾ!' ನೋವು, ಮಧುರವಾದ ನೋವು, ಇನ್ನಷ್ಟು ಬೇಕೆನ್ನಿಸುವ ನೋವು.

'ನೋವಾಯಿತೆ?'

'ಹೂ.'

'ಹಾಗಾದರೆ ನೀನು ಎಚ್ಚರವಾಗಿದೀಯ. ಕನಸು ಕಾಣುತ್ತಿಲ್ಲ. ಇನ್ನಾದರೂ ಬಾ' ಎದೆಯನ್ನು ಸುತ್ತಿಕೊಂಡು ಹಾಗೇ ಸೆಳೆದುಕೊಂಡಳು. ಕೇಳುವ ಮುನ್ನ ಬಳ್ಳಿಯಿಂದ ಹೂವನ್ನು ಎಳೆದುಕೊಂಡ ಹಾಗೆ.

ಮುಖಕ್ಕೆಲ್ಲಾ – ಕಣ್ಣಿಗೆ, ತುಟಿಗೆ, ಕೆನ್ನೆಗೆ, ಹಣೆಗೆ – ಅಗ್ನಿಮುದ್ರೆಯೊತ್ತುತ್ತಿದಾಳೆ. ಕೋಣೆಯ ಗಾಳಿ, ಕಿಟಕಿಯೊಳಗೆ ತೂರಿಬಂದ ಚಂದ್ರಕಿರಣ, ಜಾಜಿಯ ಪರಿಮಳ ಎಲ್ಲವೂ ಬಿಸಿಯಾಗುತ್ತಿವೆ.

ಎದೆಗೆ ಮುತ್ತಿಟ್ಟು, ಗಲ್ಲಕ್ಕೆ ಗಲ್ಲವಿಟ್ಟು, ತುಟಿಗೆ ತುಟಿ ತಗುಲಿಸಿ ಕೇಳಿದೆ –

'ಇನ್ನೊಂದು ಪ್ರಶ್ನೆಗೆ ಉತ್ತರ ಹೇಳುತ್ತೀಯಾ?'

'ಒಂದೇ ಒಂದು?'

'ಹೂ. ಒಂದೇ ಒಂದು.'

'ಹೂ'

'ನಿನ್ನನ್ನು ಯಾರು ಕಳಿಸಿದರು?'

'ಹೇಳಲೇಬೇಕೇ?'

'ಹೂ. ಹೇಳು.'

'ಇನ್ನೂ ಹಟವೇ? ಹೇಳಲೇಬೇಕೇ?'

'ಒಪ್ಪಿದ್ದೀಯ.'

'ನೀನು ನಿರ್ಭಾಗ್ಯ.'

'ಆ್ಞ! ಏನೆಂದೆ?'

'ನೀನು ನಿರ್ಭಾಗ್ಯ!'

'ನಿಜ. ಯಾರೋ ಇನ್ನೊಬ್ಬರು ಹಾಗೆ ಹೇಳಿದ್ದರು.'

'ಅವರೇ!'

'ಯಾರು?'

'ಜ್ಞಾಪಕವಿಲ್ಲವೇ?'

'ಊಹೂ. ಈಗಾವುದೂ ಜ್ಞಾಪಕವಿಲ್ಲ.

'ವೇಲಾಯುಧ'

ಚಟಕ್ಕನೇ ಮಂಚದಿಂದ ಸಿಡಿದು ಮೇಲೆದ್ದೆ. ವೇಲಾಯುಧ, ವೇಲಾಯುಧ, ವೇಲಾಯುಧ........

ನೀರವ ನಿಶೆಯಲ್ಲಿ ಗಂಟೆ ಹೊಡೆದ ಹಾಗೆ, ನೆನಪಿನ ಗೋಪುರದಲ್ಲಿ ಸ್ಪಷ್ಟವಾಗಿ ಕೇಳಿಬಂತು -- ವೇಲಾಯುಧ!

* * * *

ವೇಲಾಯುಧ!

ವೇಲಾಯುಧ ತಿರುಕರವನು! ಹೊತ್ತಿನ ಕೂಳಿಗೂ ನೆಲೆಯಿಲ್ಲದ ಭಿಕಾರಿ.

ಆದರೆ ವಿಚಿತ್ರ ಭಿಕ್ಷುಕ!

ಬೇರೆಯವರಿಗೆ ಮೂರು ಕಾಸು ಸಾಕಾದರೆ, ಅವನಿಗೆ ನಾಲ್ಕಾಣೆಯೇ ಬೇಕು. ಕೇಳಿದ್ದೇ ಕೊಡಬೇಕು, ಇಲ್ಲವಾದರೆ ಏನೂ ಬೇಡ.

ಸಂಗೀತ ಕಲಿಯಲು ಆ ಊರಿಗೆ ಬಂದಿದ್ದ ನನಗೆ ಹೇಗೋ ಗಂಟು ಬಿದ್ದಿದ್ದ. ಅವನ ವಿಚಿತ್ರ ರೀತಿಗೆ ಹೇಗೋ ನಾನೂ ಸೋತುಹೋಗಿದ್ದೆ.

ಅವನ ತೇಪೆಯ ಅಂಗಿ, ಕೆದರಿ ಧೂಳು ಹಿಡಿದ ಕೂದಲು, ಹೊರವಾಗಿ ಗಡ್ಡ ಬೆಳೆದ ಮುಖ. ಆದರೂ ಅವನ ಕಣ್ಣುಗಳಲ್ಲೇನೊ ವಿಚಿತ್ರ ಬೆಳಕು!

ಮನಸಿಗೆ ಬಂದಷ್ಟು ಬೇಡುತ್ತಿದ್ದ ಅವನು, ಅವನು ಕೇಳಿದ್ದನ್ನೆ ಕೊಡುತ್ತಿದ್ದೆ ನಾನು. ದಿನದಿನಕ್ಕೆ ಸಖ್ಯ ಬೆಳೆದುಬಂತು.

ಯಾರ ಹಂಗೂ ಇಲ್ಲದ, ಸ್ವೇಚ್ಛೆಯಾಗಿ ಬೆಳೆದ ಒಂಟಿಗ ನಾನು, ನನ್ನ ಹಾಗೇ ಅವನು. ಆದರವನು ತಿರುಕ, ನಾನು ಧನಿಕ.

ಊರಿಗೆ ಹೊಸಬ ನಾನು. ನೆರೆಹೊರೆಯವರು ಹೇಳಿದರು :

'ಅವನ ಸಹವಾಸ ಮಾಡಬೇಡ. ಅವನು ಮಂತ್ರವಾದಿ. ತಿಳಿಯದ ನಿನಗೆ ಏನಾದರೂ ಮಾಡಿಬಿಟ್ಟಾನು.'

ಹ್ಹೊ ಹ್ಹೊ ಹ್ಹೋ! ಮೈ ಅದುರುವಷ್ಟು ನಕ್ಕುಬಿಟ್ಟೆ. ಉಫ್ ಎಂದರೆ ಉರುಳುವ ಮುದುಕ ಭಿಕಾರಿ, ಉಕ್ಕಿನಂಥ ಮೈಯ ನನ್ನಂಥಕ ಸರತ್ತು ಮಾಡಿದವನಿಗೆ ಏನು ಮಾಡಿಯಾನು?

ಆದರೂ ಅವರ ಮಾತು ಕೇಳಿ ನನ್ನ ಕುತೂಹಲ ಕೆರಳಿತು. ಒಂದು ದಿನ ವೇಲಾಯುಧನನ್ನು ಕೇಳಿದೆ :

' ಊರಿನವರನ್ನುತ್ತಾರೆ -- ನೀನು ಮಂತ್ರವಾದಿಯಂತೆ ನಿಜವೇ ? '

ನಕ್ಕುಬಿಟ್ಟ ವೇಲಾಯುಧ—

' ನಾನು ಮಂತ್ರವಾದಿಯಾಗಿದ್ದರೆ ತಿರುಪೆಗೆ ಬರುತ್ತಿದ್ದನೇ ? ಹೇಳುವರು ಹೆಡ್ಡರಾದರೆ, ಕೇಳುವರೂ ಹೆಡ್ಡರಾಗಬೇಕೇ ? '

ನಾನೂ ನಿಜ ಎಂದುಕೊಂಡು ಸುಮ್ಮನಾದೆ. ಮತ್ತೆಂದೂ ಅವನನ್ನು ಆ ಪ್ರಶ್ನೆ ಕೇಳಲಿಲ್ಲ.

ಒಂದು ದಿನ ಹುಣ್ಣಿಮೆಯ ರಾತ್ರಿ ಊಟ ಮುಗಿಸಿ ವರಾಂಡಾದಲ್ಲಿ ಕೂತಿದ್ದೆ. ಹತ್ತು ಗಂಟೆ ಇರಬೇಕು. ವೇಲಾಯುಧ ಬಂದ.

' ಏನು ವೇಲಾಯುಧ ಇಷ್ಟು ಹೊತ್ತಿನಲ್ಲಿ ಬಂದೆ ? '

' ಇವತ್ತೇಕೋ ಈಗಲೇ ನಿನ್ನನ್ನು ನೋಡಬೇಕೆನ್ನಿಸಿತು. ಬಂದೆ.'

' ಸರಿ. ಏನಾದರೂ ಬೇಕಾಗಿತ್ತೇನು ? '

' ಬೇಡಲಿಕ್ಕಲ್ಲ ನಾ ಬಂದದ್ದು, ಕೊಡಲಿಕ್ಕೆ.'

ವಿಚಿತ್ರವಾಗಿತ್ತು ಅವನು ಆ ಮಾತಾಡಿದ ರೀತಿ. ಹುಚ್ಚುನಗೆ ಬಂತು. ಇವನು ಕೊಡುವವನು, ತೆಗೆದುಕೊಳ್ಳುವವನು ನಾನು.

' ನಗಬೇಡ. ಏನು ಬೇಕೋ ಕೇಳು.'

' ಏಕೆ ವೇಲಾಯುಧ. ಇವತ್ತೇನಾದರೂ ಕುಡಿದು ಬಂದಿದ್ದೀಯೇನು ? ಅಥವಾ ಹೊಟ್ಟೆಗಿಲ್ಲದೆ ಪಿತ್ತ ಕೆರಳಿದೆಯೊ ? '

' ಎರಡೂ ಇಲ್ಲ. ಒಂದು ದಿನ ನೀನು ನನ್ನನ್ನೊಂದು ಪ್ರಶ್ನೆ ಕೇಳಿದ್ದೆ. ಜ್ಞಾಪಕವಿದೆಯೇ ? '

' ಏನದು ? '

' ನಾನು ಮಂತ್ರವಾದಿಯಂತೆ. ಅಹುದೇ ಎಂದು ಕೇಳಿದ್ದೆ. ನೆನಪಿದೆಯೇ ? '

' ಹೂ. ಜ್ಞಾಪಕವಿದೆ.'

' ಅವತ್ತು ನಾನು ಮಂತ್ರವಾದಿಯಲ್ಲವೆಂದೆ. ಇವತ್ತು ಹೇಳುತ್ತೇನೆ— ಆ ಮಾತು ನಿಜ. ನಾನು ಮಂತ್ರವಾದಿ. ಇಷ್ಟುದಿನ ನಾನು ಕೇಳಿದ್ದನ್ನು

ನೀನು ಕೊಟ್ಟಿದೀಯ. ಇವತ್ತು ನಿನಗೇನು ಬೇಕೋ ಕೇಳು, ನಾನು ಕೊಡುತ್ತೇನೆ.'

'ತಮಾಷೆ ಮಾಡಬೇಡ ವೇಲಾಯುಧ. ಏನಾದರೂ ಬೇಕಾದರೆ ನೇರವಾಗಿ ಕೇಳು. ನನಗೆ ನಿದ್ರೆ ಬರುತ್ತಿದೆ.'

'ತಮಾಷೆ ಮಾಡುತ್ತಿಲ್ಲ. ಇವತ್ತು ನೀನು ಬೇಡಿದ್ದನ್ನು ಕೊಡುವ ಬುದ್ಧಿ ಬಂದಿದೆ. ಹಿಂದೆ ಯಾರಿಗೂ ನಾನು ಈ ರೀತಿ ಹೇಳಿರಲಿಲ್ಲ. ಇವತ್ತು ನಿನಗೆ ಹೇಳುತ್ತಿದೇನೆ– ಅದೇನು ಬೇಕೋ ಕೇಳು – ಬೇಕಾದ್ದು.'

'ಖಂಡಿತವಾಗಿಯೂ ?'

'ಖಂಡಿತವಾಗಿಯೂ.'

ಏನು ಕೇಳಲಿ ನಾನು ಅವನನ್ನು. ಹೊರಗಡೆ ಹಾಲು ಬೆಳದಿಂಗಳು ಹೊಳೆಯುತ್ತಿತ್ತು. ತಣ್ಣನೆಯ ಇರುಳುಗಾಳಿ. ಮಂಕಾಗಿ ಹೊಳೆವ ಚಿಕ್ಕೆ ಮುಗಿಲಲ್ಲಿ. ಪ್ರಾಯದ ಮೈ ಕಾವಾಗುತ್ತಿತ್ತು.

'ಏನು ಕೇಳಿದರೂ ಕೊಡುತ್ತೀಯಾ ವೇಲಾಯುಧ ?'

'ಕೊಡುತ್ತೇನೆ. ಏನು ಕೇಳಿದರೂ ಇಲ್ಲವೆನ್ನುವುದಿಲ್ಲ.'

'ಸರಿ ಹಾಗಾದರೆ. ನೋಡು, ಈ ಹುಣ್ಣಿಮೆಯ ರಾತ್ರಿಗೆ, ಚಂದ್ರನಂಥ ಮುಖದ ಜೊತೆಗಾತಿಯೊಬ್ಬಳು ಬೇಕು ನನಗೆ; ಹಿಂದಾರೂ ನೋಡದಂಥ ಸುಂದರಿಯಾಗಿರಬೇಕು. ಸಾಧ್ಯವೇ ?'

'ಇಷ್ಟೇನೇ ?' ಅವನ ಧ್ವನಿಯಲ್ಲಿ ನಿರಾಶೆಯಿತ್ತು.

'ಕೊಡುವ ಮನಸಿದ್ದರೆ, ಇಷ್ಟೇ ಸಾಕು.' – ಕೆಣಕುವನಂತೆ ಉತ್ತರ ಕೊಟ್ಟೆ.

'ಇದು ಬಿಟ್ಟು ಬೇರೆ ಏನೂ ಬೇಡವೇ ? ಬೇಕಾದ್ದು ಕೇಳು.'

'ಇನ್ನೇನೂ ಬೇಡ.'

'ನಿನಗೆ ಬುದ್ಧಿ ಇಲ್ಲ. ತಮಾಷೆಯೆಂದುಕೊಂಡಿದ್ದಿ. ಈಗಲೂ ಹೇಳುತ್ತೇನೆ. ಹುಡುಗಾಟ ಬಿಟ್ಟು ಸರಿಯಾಗಿ ಕೇಳು.'

'ನೋಡು ವೇಲಾಯುಧ. ಈ ಬುದ್ಧಿವಾದ ನನಗೆ ಬೇಡ. ನೀನು ಮಂತ್ರವಾದಿಯಲ್ಲ. ನನಗೇನೂ ಕೊಡಲಾರೆ. ಆದರೂ ಏನೋ ಹುಡುಗಾಟವಾಡುತ್ತಿದೀಯ. ಹೋಗಲಿ ಬಿಡು.'

'ನಿಶ್ಚಯವಾಗಿಯೂ ಹೇಳು. ನಿನಗೆ ಅದೊಂದು ಬಿಟ್ಟರೆ ಬೇರೆ ಏನೂ ಬೇಡಲೇಬೇಡವೇ?'

'ಊಹು, ಸಾವಿರ ಸಾವಿರ ಬಾರಿ ಅದೇ ಬೇಕು.'

'ಸರಿ. ನೀನು ನಿರ್ಭಾಗ್ಯ. ನಿನ್ನ ಮನಸಿನಂತೆಯೇ ಆಗಲಿ. ಆದ ರೊಂದು ಮಾತು – ಈಗಲೇ ಹೇಳುತ್ತೇನೆ ಕೇಳು. ಬಯಸಿದಂಥ ಸುರ ಸುಂದರಿಯೇ ಬರುತ್ತಾಳೆ. ಬೇಕಾದ ಆಟ ಆಡು ಅವಳ ಹತ್ತಿರ. ಆದರೆ ಸಂಭೋಗ ಮಾತ್ರ ಬಯಸಬೇಡ. ಆ ಹೆಣ್ಣು ಬರುವುದು ಇದೊಂದೇ ರಾತ್ರಿ. ಸಂಭೋಗ ಮಾಡಿದರೆ, ಅವಳ ಹುಚ್ಚು ಮಾತ್ರ ಸಾಯುವ ವರೆಗೂ ಬಿಡುವುದಿಲ್ಲ. ನಿನ್ನ ಎಚ್ಚರಿಕೆ ನಿನ್ನ ಕೈಲಿರಲಿ.'

'ಆಗಲಿ. ಮೊದಲು ಹುಡುಗಿ ಬರಲಿ. ಆಮೇಲೆ ಮುಂದಿನ ಮಾತು.'

'ಯೋಚನೆ ಮಾಡಬೇಡ, ಬರುತ್ತಾಳೆ. ನಂಬು.'

'ನಂಬಿದೆ. ಆಯಿತೇ?'

'ನಿರ್ಭಾಗ್ಯ ನೀನು! ಬೇಡಿದ ವರ ಕರುಣಿಸುತ್ತೇನೆ ಎಂದು ದೇವರು ಹೇಳಿದಾಗ, ಮೂರು ಗಳಿಗೆಯ ಸುಖ ಬಯಸಿದವನಂಥ ಮೂರ್ಖ! ಹ್ಞು.'

ದೀರ್ಘವಾಗಿ ನಿಟ್ಟುಸಿರಿಟ್ಟು, ಕೂದಲು ಕೆದರಿದ ತಲೆಯನ್ನು ಅತ್ತಿಂದಿತ್ತ ಅಲ್ಲಾಡಿಸುತ್ತ ಮರ್ದಾನ ತೆಗೆದುಕೊಂಡವನಂತೆ ವೇಲಾಯುಧ ಹೊರಟುಹೋದ. ಪ್ರಶಾಂತ ನಿಶೆಯ ಚಂದ್ರಿಕೆಯಲ್ಲಿ, ಅವನ ನೆರಳೂ ಅವನನ್ನು ಹಿಂಬಾಲಿಸಿತು.

ಬಿರುನೋಟದಲ್ಲಿ ಅವನನ್ನೂ ಅವನನ್ನು ಹಿಂಬಾಲಿಸಿದ ನೆರಳನ್ನೂ ದಿಟ್ಟಿಸಿ ನೋಡಿದೆ.

ದಿಟ್ಟಿಸಿ ದುರುಗುಟ್ಟಿ ನೋಡಿದೆ.

* * * *

'ಹೀಗೇಕೆ ನೋಡುತಾ ಇದೀಯಾ. ಹತ್ತಿರ ಬಾ. ದೂರ ಹೋಗಬೇಡ.

'ನಿಜವಾಗಿಯೂ ವೇಲಾಯುಧ ಕಳಿಸಿದವಳೇ ನೀನು?'

'ನಿನಗಿಟ್ಟ ಮುತ್ತಿನಾಣೆ. ಅವಳೇ ನಾನು! ಬಾ. ವೃಥಾ ಕಾಯಿಸ ಬೇಡ.'

ಹೊರಗಡೆ, ಮೋಡ ಮುಸುಗಿ ತಿಂಗಳ ಬೆಳಕು ಮಂಕಾಗಿತ್ತು. ಗಾಳಿ ಸ್ವಲ್ಪ ಬಲವಾಗಿ, ತೂಗುಹಾಕಿದ, ದೊಡ್ಡಮನಾಡದ ದೀಪ ಅತ್ತಿಂದಿತ್ತ ಒಲೆದಾಡುತ್ತಿತ್ತು. ಅದಕ್ಕೆ ಅಡ್ಡವಾಗಿ ನಿಂತ ನನ್ನ ನೆರಳು, ದೀಪ ಆಡಿದಹಾಗೆ ಅವಳ ಮುಖದಮೇಲೆ ಕತ್ತಲು, ಬೆಳಕು ಚೆಲ್ಲುತ್ತಿತ್ತು. ನೆಲ ಕಾಲು ನುಂಗಿದವನಂತೆ ನಿಂತಲ್ಲೇ ನಿಂತಿದ್ದೆ.

'ಬರುವುದಿಲ್ಲವೇ ನೀನು ?' ಏನು ಸೆಳೆತ ಕರೆವ ಆ ವೀಣಾವಾಣಿ ಯಲ್ಲಿ. ಸೂಜಿಗಲ್ಲಂತೆ ಸೆಳೆಯುತ್ತಿದೆ.

'ನಿನಗಾಗಿ ಎಷ್ಟೋ ದೂರದಿಂದ ಬಂದೆ. ಅಷ್ಟು ದೂರದಿಂದ ಸೆಳೆದು ತಂದ ನಿನಗೆ ನನ್ನ ಮೇಲೆ ಈಗಿಷ್ಟು ನಿರ್ದಯೆಯೆ ?'

ಏನು ಉತ್ತರ ಕೊಡಲಿ ? ಕಂಪಿಸುತ್ತಿರುವ ಆ ಕರೆಗೆ ಏನು ಉತ್ತರ ಕೊಡಲಿ ?

'ಹೇಳು ನಲ್ಲ. ನಿನಗೆ ನಾನು ಬೇಡವಾಗಿ ಹೋದೆನೆ ? ಹೋಗೆನ್ನು ವುದಾದರೂ ಒಮ್ಮೆ ಮುತ್ತಿಟ್ಟು ಹೊರಟುಹೋಗೆಂದು ಹೇಳು.'

ಗಳಿಗೆ ಗಳಿಗೆಗೆ ಆ ನಕ್ಷತ್ರಕಾಂತಿಯ ಕಣ್ಣಲ್ಲಿ ಹನಿ ತುಂಬಿ, ಹೊಳಪಾ ಗುತ್ತಿದೆ.

'ನಾ ಸೈರಿಸಲಾರೆ. ಬಯಸಿ ಬಂದ ಹೆಣ್ಣು ನಾನು. ಹೇಳು ಇನಿಯಾ ! ನಾನೇಕೆ ನಿನಗೆ ಬೇಡವಾದೆ ? ಚುಂಬಿಸಿದ ತುಟಿ, ನಿನ್ನ ತೋಳು ಬಿಗಿದ ಈ ಎದೆ ನಿನಗೇಕೆ ಬೇಡವಾಯಿತು ?'

ಮೈಯೊಳಗೆ ಯಾವುದೋ ಬಿರುಗಾಳಿ, ಕಟ್ಟಿದ ಕಾಳಿಂಗನಂತೆ ಮೊರೆ ಯುತ್ತಿದೆ. ಮುಖ ತಾನೇ ಬೆವರಿಡುತ್ತಿದೆ. ಅವಳ ಕಣ್ಣಲ್ಲಿ ಕಂಬನಿ ತುಳು ಕಿತು. ಅಮಾವಾಸ್ಯೆಯ ಇರುಳ ಕರಾಳಗರ್ಭದಿಂದ ನೆಲಕ್ಕೆ ತುಳುಕುವ ನಕ್ಷತ್ರದಂತೆ, ಕಪ್ಪು ಕಣ್ಣಿಂದ, ಹೊಳಪು ಕಂಬನಿ ತುಳುಕಿತು. ಹೃದಯ ವನ್ನೇ ಕಿತ್ತು ಒಯ್ಯುತ್ತಿದೆ.

ದೀನ ವದನಾರವಿಂದ, ಸ್ವಲ್ಪ ಕಳೆಗೆಟ್ಟು ಸಣ್ಣದಾಗಿಸಿದ ದೀಪದಂತೆ ಹೊಳೆವ ತುಟಿ, ಜಾರಿದ ಕಂಬನಿ ಹೊಳೆಯುತ್ತಿರುವ ಹೂ ಕೆನ್ನೆ—

ಊಹೂ – ಹಾರಿಸಿಕೊಂಡು ಹೋಗದೆ ಬಿಡದು ಈ ಬಿರುಗಾಳಿ.

ಹತ್ತಿರ ಬರುತ್ತಿದಾಳೆ, ಬಳ್ಳಿಯಂತೆ ಬಳುಕಿ ಬರುತ್ತಿದಾಳೆ, ತೂಗಾ ಡುತ್ತಾ ಬಳಿ ಸಾರುತ್ತಿದಾಳೆ.

ಹತ್ತಿರ ಬಂದು, ಕತ್ತನ್ನು ಬಿಗಿದು, ಮೈಗೆ ಮೈ ಒರಗಿಸಿ, ಎದೆಯಲ್ಲಿ ಮುಖ ಮರೆಸಿಕೊಂಡು, ಹೃದಯವನ್ನೇ ಕೇಳುವಂತೆ ಕೇಳಿದಳು :

'ನಿನಗೆ ನಾನೇಕೆ ಬೇಡವಾದೆ ಹೇಳು ?'

ಕೈಯಲ್ಲಿ ಮುಖ ಹಿಡಿದು ಕೇಳಿದಳು. ವಿಗ್ರಹದಂತೆ ನಿಂತ ನನ್ನ ತುಟಿಗೆ ಮುತ್ತು ಒತ್ತಿ ಕೇಳಿದಳು – 'ನಾ ಬೇಡವೇ ನಲ್ಲ ನಿನಗೆ ?'

ತೋಳತೆಕ್ಕೆಯಲ್ಲಿ ಅವಳ ಮೈ ಕಂಪಿಸುತ್ತಿದೆ, ದುಃಖದ ಕಠೋರ ಅಡಿಯಲ್ಲಿ ಅವಳ ಧ್ವನಿ ಕಂಪಿಸುತ್ತಿದೆ. ರಾಗದ ವೇಗಕ್ಕೆ ತುಟಿ ಕಂಪಿಸುತ್ತಿದೆ. ಬಿರುಗಾಳಿಯ ಸ್ಪರ್ಶಕ್ಕೆ ಕಂಪಿಸುವ ಹೂವಿನಂತೆ ಕಂಪಿಸುತ್ತಿದ್ದಾಳೆ.

ಏನು ಉತ್ತರ ಕೊಡಲಿ ?

ವೇಲಾಯುಧನ ಮುಖ, ಅವನ ಬಿರುಸಾದ ಧ್ವನಿ 'ಹುಷಾರ್ ಹೆಜ್ಜೆ ಮುಂದಿಟ್ಟೀಯ' ಎನ್ನುತ್ತಿದೆ.

'ಓಕೊಡಲಾರೆಯಾ ನಲ್ಲ' ಎಂದು ಕೇಳುತ್ತಿದ್ದಾಳೆ ಆರ್ತ ಪ್ರಣಯಿನಿ

ಯಾರಿಗೆ ಏನು ಹೇಳಲಿ ?

ಅವಳ ಮೈಯ ಕಾವು ನನ್ನನ್ನು ದುರ್ಬಲಗೊಳಿಸುತ್ತಿದೆ. ತಳ್ಳಿ ಬಿಡಲೇ ?

ಮೃದುವಾದ ಮೈಯನ್ನು ಕಠೋರವಾಗಿ ತಳ್ಳಿಹಾಕಿಬಿಡಲೇ ? ಆ ಕಣ್ಣೆರಡೂ, ಕಣ್ಣಲ್ಲೇ ಜೀವವಾಡಿಕೊಂಡು ನನ್ನನ್ನೇ ನೋಡುತ್ತಿವೆ. ನನ್ನನ್ನೇ. ನನ್ನ ತುಟಿಗಾಗಿ, ಆ ಕೆಂಪು ತುಂಬು ತುಟಿಗಳು ಕಂಪಿಸಿ ಕಾದಿವೆ.

ಏನು ಮಾಡಲಿ ? ವೇಲಾಯುಧ – ರೂಪಸಿ, ರೂಪಸಿ – ವೇಲಾಯುಧ, ವೇಲಾಯುಧ – ರೂಪಸಿ, ರೂಪಸಿ.....ರೂಪಸೀ.....ರೂಪಸೀ.....

ತೋಳತೆಕ್ಕೆಯಲ್ಲೊರಗಿದ ಅವಳನ್ನು ಮೈಯೊಳಗೆ ಅಡಗಿಸಿಕೊಳ್ಳುವನಂತೆ ಬಿಗಿಯಾಗಿ ಜಿಸೆದುಕೊಂಡು ಹೇಳಿದೆ.

'ರೂಪಸೀ ನಾನು ನಿನ್ನವನು.'

ನಿಂತವಳು ಹಾಗೇ ಹಾಸಿಗೆಯಮೇಲೊರಗಿದಳು. ಅವಳೊಡನೆಯೇ ನಾನು.

ಬ್ಬಾ ? ಏನು ಬಗಿತ ಅವಳ ತೋಳುಗಳದು. ಎಷ್ಟು ಮೃದುವಾಗಿದೆ

ಅವಳ ಮೈ. ಎದೆಯು ಕಾವೆಷ್ಟು ಹಿತವಾಗಿದೆ. ಓ! ಈ ಕಟಿ ಎಷ್ಟು ಸೊಗಸು. ತೊಡೆ ಎಷ್ಟು ನುಣುಪಾಗಿದೆ. ಏನು ಮಾದಕತೆ ಈ ತುಂಬುಕುಚಗಳದು.

ರಾಗಾವೇಗಕ್ಕೆ ನನ್ನ ಮೈ ಕಂಪಿಸುತ್ತಿದೆ....

'ರೂಪಸೀ ನಾನು ನಿನ್ನವನು.'

'ಮುತ್ತು ಕೊಡು ನಲ್ಲ. ಇನ್ನು ನೀನು ನನ್ನವನೇ.'

ಆ ಜೇನುತುಟಿಗಳೆರಡನ್ನೂ ತುಟಿಗಳಲ್ಲಿ ಕಚ್ಚಿಕೊಂಡೆ. 'ಹಾ' ಎಂದಳು. ಆ ನೋವಿನ ದನಿಯೂ ಎಷ್ಟು ಮಧುರ....

'ರೂಪಸೀ, ನೀನು ನನ್ನವಳು.'

'ಹೂ ನಲ್ಲ. ಇನ್ನು ನೀನು ನನ್ನವನೇ'

ಉಕ್ಕಿಬಂದ ರಾಗ ಕಣ್ಣನ್ನು ಕತ್ತಲಿಡಿಸಿತ್ತು. ದೀಪ ಬಲವಾಗುತ್ತಿರುವ ಗಾಳಿಗೆ ವೇಗವಾಗಿ ತೂಗಾಡುತ್ತಿದೆ; ಕತ್ತಲು ಮತ್ತಷ್ಟು ಕತ್ತಲಾಗುತ್ತಿದೆ. ಅವಳ ತುಟಿಯು, ಜಾಜಿಯ ಪರಿಮಳದ ಮಾದಕತೆ ರಂಗೇರುತ್ತಿದೆ. ಮಂಕಾದ ಚಂದ್ರಕಾಂತಿ ಪ್ರಕ್ಷರಸವಾಗಿದೆ. ಅವಳ ಕಣ್ಣು ಫಳಫಳ ಹೊಳೆಯುತ್ತಿವೆ—

ಗಟ್ಟಿಯಾಗೊಮ್ಮೆ ಬಿಗಿದುಕೊಂಡು ಹೇಳಿದಳು—

'ಇನ್ನು ನೀನು ನನ್ನವನೇ.'

..............................

'ಅಲ್ಲ. ಅವನು ನಿನ್ನವನಲ್ಲ. ಆಗಲಾರ. ಸರಿಯಾಚೆ.

ಉಕ್ಕಿನ ಚಾಟಿ ಝಳಪಿಸಿದಂತೆ ಕೇಳಿಸಿತು ಮಾತು. ಯಾರದು ಈ ಬಿರುಸಾದ ದನಿ? ಬೆಚ್ಚಿಬಿದ್ದೆ.

—ವೇಲಾಯುಧ!

ಅವನ ಕಣ್ಣುಗಳೆರಡೂ ಉಗ್ರವಾಗಿ, ಕೆಂಡದಂತೆ ಹೊಳೆಯುತ್ತಿವೆ. ಕೂದಲು ಹೊರವಾಗಿ ಬೆಳೆದ ಮುಖದಲ್ಲಿ.

'ಹೊರಡು ರೂಪಸೀ.'

'ವೇಲಾಯುಧ!'

'ನೀನು ಸುಮ್ಮನಿರು. ಹೊರಡು ರೂಪಸಿ....ನನಗೆ ಗೊತ್ತಿತ್ತು ನಿನ್ನಲ್ಲಿ ರೂಪಸಿಯನ್ನು ತಡೆವ ಶಕ್ತಿ ಇಲ್ಲವೆಂದು. ಆದರೂ ಅವಳನ್ನೇ

ಬಯಸಿದೆ ; ಬೇಡವೆಂದರೂ ಬಯಸಿದೆ. ಹಾಳಾಗಿ ಹೋಗು ಎಂದು ಹೊರಟು ಹೋಗಿದ್ದೆ. ಆದರೂ ಯಾವುದೋ ಪ್ರೇಮ ಕರೆತಂದಿತು. ಮೂರ್ಖ ನೀನು, ನೀನು ಹಾಳಾಗುವುದನ್ನು ನಾ ನೋಡಲಾರದಾದೆ. ಇಲ್ಲಿ ನೋಡು ನನ್ನನ್ನು.'

ವಿದ್ಯುದಾಕರ್ಷಿತನಂತೆ ಅವನ ಮುಖವನ್ನೇ ದಿಟ್ಟಿಸಿ ನೋಡಿದೆ. ಕಣ್ಣುಗಳೆರಡು, ಹಾವುಗಣ್ಣಿನಂತೆ ನನ್ನ ಕಣ್ಣನ್ನು ಸೆರೆ ಹಿಡಿದಿದ್ದವು.

ಜೆನ್ನಹಿಂಪೆ ಬಳೆಯ ಸದ್ದಾದಂತಾಯಿತು. ಮೃದುವಾದ ರೇಶಿಮೆ ಹೂ ಎಸಳಿನಂತೆ ತೇಲಿತು. ಕಾಲಗೆಜ್ಜೆಯ ಇಂಚರ ಎಳೆಯಾಗಿ ದೂರವಾಯಿತು. ನಿಧಾನವಾಗಿ, ಗಳಿಗೆ ಗಳಿಗೆಗೆ ಕಡಿಮೆಯಾಗುತ್ತ ಜಾಜಿಯ ಹೂವಿನ ಪರಿಮಳ ಎಲ್ಲೋ ಕರಗಿಹೋಯಿತು. ದೂರದಿಂದಲೆಲ್ಲೋ ಮಂಜುಳವಾದ ನಗುವಿನ ಸದ್ದು ಅಲೆಯಲೆಯಾಗಿ ಕೇಳಿಬಂದು, ಅದೂ ಕರಗಿಹೋಯಿತು.

'ಇನ್ನು ನಾನು ಹೋಗುತ್ತೇನೆ. ಈ ಜನ್ಮದಲ್ಲಿ ನೀನು ಮತ್ತೆ ನನ್ನನ್ನು ನೋಡಲಾರೆ.'

ಎಂದವನೇ ವೇಲಾಯುಧ ಮತ್ತೆ ನನ್ನ ಕಡೆ ತಿರುಗಿ ಕೂಡಾ ನೋಡದೆ ಬಿರುಗಾಳಿ ಸೆಳೆದವನಂತೆ ಹೊರಟುಹೋದ.

ದೂರದಲ್ಲಾರೋ ನಿಟ್ಟುಸಿರಿಟ್ಟಂತಾಯಿತು.

ಕಿಟಕಿಯಿಂದಾಚೆ ಮೋಡ ತೊಲಗಿ, ಚಂದ್ರ ಶುಭ್ರನಾಗಿ ಹೊಳೆಯುತ್ತಿದ್ದ.

ಯಾರೋ ಹೇಳುತ್ತಿದ್ದ ಹಾಗಿತ್ತು.

'ನೀನು ಮಹಾ ನಿರ್ಭಾಗ್ಯ.'

* * * *

'ನಿಜ. ನಿಶ್ಚಯವಾಗಿಯೂ ನಾನು ನಿರ್ಭಾಗ್ಯ. ಅಂದಿನಿಂದ ಇಂದಿನವರೆಗೆ ನಾನು ಹಿಂದೂಸ್ಥಾನವನ್ನೆಲ್ಲಾ ನಾಲ್ಕಾರು ಬಾರಿ ಸುತ್ತಿದೇನೆ. ಮೂಲೆಮೂಲೆಗಳಲ್ಲೆಲ್ಲಾ ಅಲೆದಾಡಿದೇನೆ. ಹೋದಕಡೆಯಲೆಲ್ಲಾ ಹುಡುಕಿದೇನೆ – ಆದರೂ ಎಲ್ಲೂ ವೇಲಾಯುಧನ ದರ್ಶನವಾಗಲಿಲ್ಲ.

'ನೋಡು. ದೇವರು ನನಗೆ ಯಾವ ಸುಖಕ್ಕೂ ಕಡಮೆ ಮಾಡಲಿಲ್ಲ. ಗಂಡುಮೈ ಬಯಸಬಹುದಾದ ಸುಖೋಪಭೋಗಗಳೆಲ್ಲವೂ ಸಿಕ್ಕವು. ಆದರೂ

ಅಂದು ರೂಪಸಿಯನ್ನು ಅನುಭವಿಸಲಾಗದ ಅಸಂತೃಪ್ತಿ ಇನ್ನೂ ತೀರಿಲ್ಲ. ನಾನು ಇಬ್ಬಗೆಯಲ್ಲಿ ನಿರ್ಭಾಗ್ಯ. ಅತ್ತ ವೇಲಾಯುಧನ ಮನಸಿಗೂ ತೃಪ್ತಿ ಕೊಡಲಿಲ್ಲ. ಇತ್ತ ಬಯಸಿದ ಹೆಣ್ಣಿನಿಂದ ನಾನೂ ತೃಪ್ತಿ ಪಡೆಯಲಿಲ್ಲ.'

ಎಂದು ಭಾರವಾದ ನಿಟ್ಟುಸಿರು ಬಿಟ್ಟ ನಟರಾಜ – ಹೇಳುತ್ತಿದ್ದ ಕಥೆ ಮುಗಿಸಿ.

ಕೇಳಿ ನಾನೂ ನಿಟ್ಟುಸಿರು ಬಿಟ್ಟೆ.

ಹೊರಗಡೆ, ಕಿಟಕಿಯಿಂದಾಚೆಗೆ ಹುಣ್ಣಿಮೆಯ ಚಂದ್ರ ಶೋಭಾಯಮಾನವಾಗಿದ್ದ. ಅಂಗಳದಲ್ಲಿ ಅರಳಿದ್ದ ಜಾಜಿಯ ನರುಗಂಪು ಇರುಳ ತಂಗಾಳಿಯಲ್ಲಿ ಭಾರವಾಗಿ ತೇಲಿಬರುತ್ತಿತ್ತು.

ಸೋಫಾದಲ್ಲಿ ಕೂತಿದ್ದ ನಟರಾಜ, ಕಿಟಕಿಯಾಚೆಯ ಮುಗಿಲು ದಿಟ್ಟಿಸಿ, ಒಮ್ಮೆ ಜಾಜಿಯ ಕಂಪನ್ನು ಆಘ್ರಾಣಿಸಿ—

'ಚಂದ್ರಿಕೆ ಇದೆ, ಜಾಜಿಯ ಕಂಪಿದೆ. ರೂಪಸಿ ಎಲ್ಲಿ? ನಾನು ನಿರ್ಭಾಗ್ಯ' ಎಂದ.

ನಿಜ. ಚಂದ್ರಿಕೆ ಇತ್ತು, ಜಾಜಿಯ ನರುಗಂಪಿತ್ತು—

ಆದರೆ ರೂಪಸಿ—

???

# ಏಕೆ ಬರಲಿಲ್ಲ ?

“ಧಾ ಧೈ ಥಾತೈ ಥಕಡ ಧಿಮ್ಮಿ, ಥಾಕಡಧಿಮ್ಮಿ ಥ

ತಬಲಾ ತಾಳಕ್ಕನುಗುಣವಾಗಿ ಮಿಡಿಯುತ್ತಿತ್ತು. ಆ ಮಿಡಿತಕ್ಕನುಗುಣವಾಗಿ ಮೈ ಬಳಕುತ್ತಿತ್ತು. ಕಣ್ಣು ಅರಳುತ್ತಿತ್ತು – ನೀಲಿಯ ಬಲ್ಬಿನ ತಿಂಗಳ ಬೆಳಕಿನಂಥ ಮೃದುವಾದ ಬೆಳಕಿನಲ್ಲಿ ; ಗೋಡೆಯ ಮೇಲಿನ ನೆರಳೂ ಕುಣಿಯುತ್ತಿತ್ತು ; ಗಾಳಿಗೆ ಸಿಕ್ಕ ಬಳ್ಳಿಯ ಹಾಗೆ ಜಡೆ ತೂಗುತ್ತಿತ್ತು. ಕುಣಿಯುವ ಕಾಲು ತಿರುಗಿದತ್ತ ತಿರುಗುವ ಅರಳಿದ ನೆರಿಗೆ, ಬಿಗಿದುಕಟ್ಟಿದ ಸೆರಗು, ನಸು ಸೋತು ಬೆವರು ಮೂಡಿದ ಮುಖ, ದಣಿದ ಕಣ್ಣು, ತಬಲದ ವೇಗ ಹೆಚ್ಚಿದ ಹಾಗೆ ಮೈ ಬಳುಕಿನ ವೇಗ ಮಿಂಚಾದ ಹಾಗೆ, ತಾಳ ಭಂಗಿ ತಪ್ಪಲಾರಂಭಿಸಿತು.

‘ಥ’—ಇದ್ದಕ್ಕಿದ್ದ ಹಾಗೇ ನಿಂತಿತು ತಬಲ. ‘ಇಲ್ಲಿ ನೋಡು ಲತಾ ಹಾಗಲ್ಲ ಅದು. ಕಾಲುತೊಡೆಯಮೇಲೆ ಬರಬೇಕು, ಮೈ ಸರಿಯಾಗಿ ಬಾಗಬೇಕು, ಸೊಂಟ ಹಾಗೆ ಬಾಗಬಾರದು. ಇನ್ನೂ ಸ್ವಲ್ಪ ಒಳಗೆ, ಸ್ವಲ್ಪ ಹಾಗೆ, ಎಲ್ಲಿ, ಎದೆ ಈಕಡೆ ಬಾಗಲಿ. ಹಾಗಲ್ಲ. ಕಡ್ಡಿ ಮುರಿದು ನಿಲ್ಲಿಸಿದ ಹಾಗೆ, ನಿಲ್ಲಬಾರದು ; ಬಳ್ಳಿ ಬಾಗಿದ ಹಾಗೆ ಬಾಗಬೇಕು....ಹಾಗಲ್ಲ.... ಇಲ್ಲಿ ನೋಡು ನಾ ತೋರಿಸುತ್ತೇನೆ’ ನಾಟ್ಯ ಕಲಿಸುತ್ತಿದ್ದ ಮೂರ್ತಿ ತಾನೇ ಎದ್ದುನಿಂತು ತೋರಿಸಿದ ನಿಲುವಿನ ರೀತಿಯನ್ನು. ಲತಾ ಹಾಗೇ ನಿಲ್ಲಲು ಯತ್ನಿಸಿದಳು ; ಆಗಲಿಲ್ಲ. ದಣಿದ ಮೈ ಹೇಗೋ ಜೋಲುತ್ತಿತ್ತು.

"ನೆಟ್ಟಗೆ ನಿಂತುಕೋ. ಎಲ್ಲಿ, ಅಡಿಯನ್ನು ತೊಡೆಯ ಮೇಲಿಡು. ಹಾಗೆ. ಹಾಗೇ ನಿಂತಿರು ಬಂದೆ!" ಮೂರ್ತಿ ಎದ್ದುಬಂದು ಅವಳ ತುಂಬಿದ ತೋಳನ್ನು ಹಿಡಿದು, ಸೊಂಟವನ್ನು ಬಾಗಿಸಿ, ಉಬ್ಬಿದ ಎದೆಯನ್ನು ಹಿಡಿದು ನಸು ಪಕ್ಕಕ್ಕೆ ಸರುಗಿಸಿದ. ಲತೆಯ ಮೈಯಲ್ಲಿ ಮಿಂಚು ಹರಿದ ಹಾಗಾಯಿತು. ಅಡಿಮೇಲಾಗುವಂತೆ ಪಾದವನ್ನು ತೊಡೆಯಮೇಲೆ ಸರಿಯಾಗಿಡುತ್ತಿದ್ದ ಬಾಗಿನಿಂತ ಮೂರ್ತಿಯ ಮುಖವನ್ನು ನೋಡಿದಳು. ಬಾಗಿದ್ದರಿಂದ ಉದ್ದವಾದ ಕೂದಲು ಮುಖದಮೇಲೆ ಇಳಿಬಿದ್ದಿತ್ತು, ಕಪ್ಪು ರೇಷ್ಮೆ ದಾರದ ತೆರೆ ಅಡ್ಡ ಹಾಕಿದಂತೆ. ಅದರ ಹಿಂದಿನಿಂದ ಉಬ್ಬಿದ ಕೆನ್ನೆ, ಕಣ್ಣುಕುಡಿ, ಮೂಗಿನ ತುದಿ ಕಾಣುತ್ತಿತ್ತು. ನೀಲಿಯ ಬಲ್ಬಿನ ಮಂದವಾದ ಕಾಂತಿ ಎಲ್ಲಕ್ಕೂ ಕನಸಿನ ಕೆಣಕುವ ಬಣ್ಣ ಕಟ್ಟಿತ್ತು. ಕಂಡೂ ಕಾಣದ ಅವನ ಮುಖವನ್ನೇ ಕಣ್ಣಿಟ್ಟು ನೋಡುತ್ತಿದ್ದಳು. ಲತ. ಕಾಲನ್ನು ಸರಿಯಾಗಿ ನಿಲ್ಲಿಸಿ ಮೂರ್ತಿ, ಎದ್ದುನಿಂತು ನೋಡಿ, ನಿಲುವಿನ ಭಂಗಿ ಸರಿಯಾಗಿದೆಯೆಂದುಕೊಂಡು ಗಲ್ಲ ಹಿಡಿದು, ಬಾಗಿದ ಕತ್ತನ್ನು ನೇರವಾಗಿ ನಿಲ್ಲಿಸಿದ. ಗಲ್ಲ ಬೆರಳಿನ ಹಿಡಿತಕ್ಕೆ ಸಿಕ್ಕು ಸ್ವಲ್ಪ ನೋಯಿತು. ಹಾ! ಎಂಥ ನೋವು! ಕುಣಿದು ಕುಣಿದು ಸೋತ ಕಾಲು 'ನೆಲ ಊರಿಯೇನೆ' ಎನ್ನುತ್ತಿತ್ತು. ಅವಳನ್ನು ಹಾಗೇ ನಿಲ್ಲಿಸಿ ಹಿಂದೆ ಸರಿದುನಿಂತು—'ಹಾಗೆ ಹಾಗೆ ನಿಲ್ಲಬೇಕು. ಎಲ್ಲಿ, ಕಾಲು ಕೆಳಗೆ ಬಿಟ್ಟು ನೇರವಾಗಿ ನಿಂತು ಮತ್ತೆ ಹಾಗೆ ನಿಲ್ಲು' ಎಂದ. ಹಾಗೇ ಮಾಡಲು ಹೋದಳು ಲತಾ. ಕಾಲು ಸೀಸದ ಹಾಗೆ ಭಾರ, ಸೊಂಟ ಬಾಗದು. ಪಳಗದ ಎಲುಬು 'ನಿಲ್ಲಲಾರೆ' ಎನ್ನುತ್ತಿದೆ. ಹಾಗೂ ಯತ್ನಿಸಿ ನಿಲ್ಲಹೋದಳು. ಮೈ ತೂಕ ತಪ್ಪಿತು. ಕಾಲು ಒಂದು ಕಡೆ, ಮೈ ಒಂದು ಕಡೆ ಎಳೆಯಿತು. ನಿಂತ ದೀಪ ತೂಗಿತು. 'ಹಾ!'

ಕಣ್ಣು ಬಿಟ್ಟಾಗ ಲತಾ ಮೂರ್ತಿಯ ತೋಳಿನಲ್ಲಿದ್ದಳು. ಆ ತುಂಬಿದ ಮೃದುವಾದ ತೋಳು ಉಕ್ಕಿನ ಹಾಗೆ ಬಿಗಿದು ಉಬ್ಬಿದ ಎಸೆಯನ್ನು ಸುತ್ತಿದೆ. ಆ ಬಿಗಿತ........

'ಇವತ್ತಿಗೆ ಸಾಕು. ನೀ ಮಾಡಲಾರೆ. ಮೊದ ಮೊದಲು ಎಚ್ಚರವಾಗಿ ತೂಕ ತಪ್ಪದಹಾಗೆ ನಿಲ್ಲಬೇಕು. ಕೂತುಕೋ' ಎಂದ ಮೂರ್ತಿ,

ಮೃದುವಾದ ಧ್ವನಿಯಲ್ಲಿ. ಆ ಮೃದುವಾದರೂ ದಪ್ಪ ತಂತಿಯಹಾಗೆ ಬಿರುಸಾದ ಧ್ವನಿಯಲ್ಲಿ ಏನೋ ಒಂದು ಮಾದಕತೆ ಇದೆ.

ಕಣ್ಣು ಅರಳಿಸಿ ಮೂರ್ತಿಯ ಮುಖವನ್ನೇ ನೋಡಿದಳು. ಆ ಕಪ್ಪು ಬಳಿದ ನೇರವಾದ ಹುಬ್ಬು, ಕಾಡಿಗೆ ಹಚ್ಚಿದ ಕಣ್ಣುಕುಡಿ, ಕೆಂಪು ತುಟಿ, ಗಡುಸಾದ ಗಂಡುಗಲ್ಲ,—ಎಲ್ಲಾ ಅವಳ ಕಣ್ಣಲ್ಲಿ ಸುಳಿದುಹೋಯಿತು. 'ಕ್ಷಮಿಸಿ ಸಾರ್! ಗೊತ್ತಾಗಲಿಲ್ಲ.' 'ಪರವಾ ಇಲ್ಲ. ಎರಡು ದಿನ ಅಭ್ಯಾಸ ಮಾಡಿದರೆ ಸರಿಹೋಗುತ್ತೆ. ಇವತ್ತೇನೂ ಮತ್ತೆ ಅಭ್ಯಾಸ ಮಾಡ ಹೋಗಬೇಡ. ನಾ ಬರುತ್ತೇನೆ' ಎಂದ ಮೂರ್ತಿ.

'ನಮಸ್ಕಾರ ಸಾರ್!'

'ನಮಸ್ಕಾರ.'

ಆ ಉದ್ದವಾದ ದಂತದ ಬೆರಳು, ಮೊಗ್ಗಿನ ಹಾಗೆ ಮುಗಿದ ಕೈ........

ಮೂರ್ತಿ ಹೊರಟುಹೋದ: ನೋಡುತ್ತಲೇ ಇದ್ದಳು ಲತಾ. ತೋಟದ ಬಾಗಿಲು ತೆರೆದು ಮುಚ್ಚಿತು. ಅವಳ ಮುಚ್ಚಿದ ಮನಸಿನ ಬಾಗಿಲು ತೆರೆಯಿತು.

ಏಕೋ ದೀಪದ ಮಂದವಾದ ಬೆಳಕು ಕಣ್ಣು ಚುಚ್ಚುತ್ತಿತ್ತು. ಮೂರ್ತಿ ಹೋದಮೇಲೆ ಲತಾ ದೀಪವಾರಿಸಿ ಬಂದು ಹಾಗೇ ಸೋಫಾದ ಮೇಲೆ ಒರಗಿದಳು. ಹೊರಗಡೆಯಿಂದ ಗಾಳಿ ತಣ್ಣಗೆ ಬೀಸುತ್ತಿತ್ತು. ಕಿಟಕಿಯ ಹೊರಗೆ ಜಾಜಿಯ ಬಳ್ಳಿ ಸಣ್ಣಗೆ ಎಲೆಯಾಡಿಸುತ್ತಿತ್ತು. ಬಳ್ಳಿಯಂತೆ ಆಡುವ ಅವಳ ಎದೆಯಲ್ಲಿ ಕಾಣದ ಕೈ ಬೆರಳಾಡಿಸಿ ಏನನ್ನೋ ಕೆಣಕುತ್ತಿತ್ತು. ಗಾಳಿಯ ಸುಳಿ ಬೀಸಿ ಬಂದಾಗ ಮೂರ್ತಿಯ ಕೈ ತಗುಲಿದ ಅವಳ ಮೈಭಾಗ ಅವಳಿಗರಿವಾಗದಂತೆಯೇ ಬಿಸಿಯಾಗುತ್ತಿತ್ತು. ಏನೋ ಒಂದು ಅವ್ಯಕ್ತ ವೇದನೆ, ಅತೃಪ್ತಿ ಕೆರಳುತ್ತಿದೆ ಅವಳಲ್ಲಿ. ಕತ್ತಲಲ್ಲೂ ಮುಚ್ಚಿದ ಕಣ್ಣು ಯಾವುದೋ ಚಿತ್ರವನ್ನು ಕಾಣುತ್ತಿದೆ.

ಕೂದಲ ತೆರೆಯ ಹಿಂದಿನಿಂದ ಕಾಣುವ ಆ ಮುಖ....ಆ ಬಿಗಿದ ತೋಳು, ಆ ಕಾವು....ಅವಳರಿಯದಹಾಗೇ ಅವಳ ತೋಳು ಅವಳ ಎದೆಯನ್ನೇ ಬಿಗಿಯುತ್ತಿದ್ದವು. ಊಹು....ಆ ಬಿಗಿತವಿಲ್ಲ. ಗಲ್ಲದಮೇಲೆ ಕೈ ಬೆರಳಾಡುತ್ತಿತ್ತು; ಆ ನೋವಿಲ್ಲ....ಏನೋ ಸಾಲದು, ಏನೋ ಬೇಕು!

ಯಾವುದೋ ಭಾವನೆ, ಕಟ್ಟೆಯನ್ನು ಒತ್ತಿ ನಿಂತ ನೀರಿನಹಾಗೆ ಕಿತ್ತು ಹೊರಬರಲು ಯತ್ನಿಸುತ್ತಿದೆ. ಸೋಫಾದಮೇಲೆ ಅತ್ತಿತ್ತ ಹೊರಳಾಡಿದಳು....ಸೆಖೆ, ಗಾಳಿ ಬೀಸುತ್ತಿದ್ದರೂ ಸೆಖೆ. ತಡೆಯಲಾರದೆ ಒಮ್ಮೆ ಕೈ ಕೊಡವಿದಳು. ಹತ್ತಿರದ ಮೂಲೆಯಲ್ಲಿದ್ದ ತಂಬೂರಿಗೆ ಕೈತಾಕಿ 'ಝುಂಯ್' ಎಂದಿತು ತಂಬೂರಿಯ ತಂತಿ. ಅಲೆ ಅಲೆಯಾಗಿ ತುಂಬಿಬಂದಿತು ನಾದ. ಅವಳ ಎದೆಯಲ್ಲೂ ಒತ್ತರಿಸಿ ಬರುತ್ತಿದೆ....ನಾಲ್ಕು ಕಡೆಯಿಂದ ಕಲ್ಲಿನ ಏಟುಬಿದ್ದ ನೀರಿನಹಾಗೆ ಚಿತ್ತ ಅಲ್ಲಕಲ್ಲೋಲವಾಗುತ್ತಿದೆ .... ಏನೋ ಬೇಕು, ಏನೋ ಬೇಕು .... ಮೂರ್ತಿಯ ಗಂಡಾದರೂ ಮೃದುವಾದ, ಮೃದುವಾದರೂ ಗಂಡಾದ ಮುಖ ಮನಸಿನಿದಿರು ಬಂದಿತು; ಮೃದುವಾದರೂ ತಂತಿಯಹಾಗೆ ಬಿಗಿಯಾದ ಆ ತೋಳು, ಹರವಾದ ಎದೆ....ಅವಳ ಎದೆ ತುಯ್ಯುತ್ತಿತ್ತು. ಉಸಿರು ಬಿಸಿಯಾಗಿ ವೇಗವಾಗಿತ್ತು. ಅಬ್ಬಾ! ಉಸಿರಿನ ವೇಗಕ್ಕೆ ಎದೆ ಕಿತ್ತು ಬರುವಹಾಗಿದೆ. ಯಾರಾದರೂ ಅದನ್ನು ಒತ್ತಿ ಹಿಡಿಯಬಾರದೆ.... ಬಿಗಿಯಾಗಿ ಬಿಗಿಯಾಗಿ ಯಾರು, ಯಾರು .... ಮೂರ್ತಿ .... ಮೂರ್ತಿ .... ಗಂಟೆಯಹಾಗೆ ಹೆಸರು ಹೊಡೆದು ಕೇಳಿಬಂತು ಚಿತ್ತದ ಗೋಪುರದಲ್ಲಿ.

ಬಿಗಿತ ಕಡಿಮೆಯಾದ ಹಾಗನಿಸಿತು. ಅವನಿಗೂ ಹೀಗೆ ಅನಿಸುತ್ತಿರಬಹುದೆ? ಒಂದು ನೆಲೆಗೆ ಬಂದ ಭಾವನೆ ಹಿಂದೆ ಸರಿಯಲಾರಂಭಿಸಿತು. ತನ್ನ ಮೈಯನ್ನು ಅವನು ಹಿಡಿದದ್ದರಿಂದ ತನಗೆ ಹೀಗಾಗುತ್ತಿರುವಂತೆ ಅವನಿಗೂ ಹೀಗೇ ಅನಿಸುತ್ತಿರಬಹುದೆ? ತನ್ನ ಎದೆ ಅವನ ತೋಳ ಬಿಗಿತವನ್ನು ಬಯಸಿದಹಾಗೆ, ಅವನ ತೋಳು ತನ್ನ ಮೃದುಭಾರವನ್ನು ಬೇಡುತ್ತಿರಬಹುದೇ? ಸೆಳೆದು ನಿಂತು ಅವಳ ಮನಸು ಸವಾಲು ಹಾಕಿತು: 'ನಿನಗೆ ಅವನು ಬೇಕಾದಹಾಗೆ ಅವನಿಗೆ ನೀನು ಬೇಕಾಗಿದೆಯೇ?' ಬೇಕೇ, ಬೇಕೇ? ಬೇಡವಾದರೆ ಆ ತೋಳಿನಲ್ಲಿ ಆ ಬಿಗಿತವೇಕೆ, ತೊಡೆ ಮುಟ್ಟುವಾಗ ಅಷ್ಟು ಆಸಕ್ತಿಯೇಕೆ? ಗಲ್ಲ ಹಿಡಿದಾಗ ಅಷ್ಟೇಕೆ ಬಲವಾಗಿ? ಅವಳ ಕೆರಳಿನಿಂತ ಬಯಕೆ ನಡೆದುದೆಲ್ಲಕ್ಕೂ ತನ್ನ ಬಣ್ಣವನ್ನೇ ಬಳಿದು ನೋಡುತ್ತಿತ್ತು. ನಿಜ. ಅವನಿಗೆ ನಾನು ಬೇಕು, ಅವನಿಗೆ ನಾನು ಬೇಕು....ಅವಳ ಮನಸು, ಅವಳ ಹಟ ಹಿಡಿದ ಬಯಕೆಯ ನಿರ್ಧಾರಕ್ಕೇ ತಲೆ ಹಾಕಿತು. ಹಾಗಾದರೆ ನಾಳೆ .... ಊಹು....ನಾಳೆಯ ಸೊಗಸು ನಾ ಹೇಳಲಾರೆ' ಎಂದಿತು ಕನಸು ಕಟ್ಟಿ

ತ್ತಿದ್ದ ಮನಸು. ಸೊಬಗಿನ ಚಿತ್ರ ಬರೆಯುತ್ತಿದ್ದ ಚಿತ್ರಗಾರ ನ್ನ ಚಿತ್ರವನ್ನು ಅರೆಗಳಿಗೆ ತೋರಿಸಿ, ಮತ್ತೆ 'ಮುಗಿದಮೇಲೆ ನೋಡುವಿಯಂತೆ' ಎಂದು ತೆರೆ ಎಳೆದಹಾಗೆ ಮುಚ್ಚಿಬಿಟ್ಟಿತು. ಸೋತ ಕಣ್ಣು ಎಳೆದುಬಂತು. ದಣಿದ ಮೈ ಮಲಗಿತು ?

ಎಂದು ಬಂದೀತೋ ಆ ಸಂಜೆ ; ಯಾವಾಗ ಕೇಳಿ ಬಂದೀತೋ ಆ ಬಯಸಿದ ಹೆಜ್ಜೆ ಸಪ್ಪಳ. ಮೈ ನಡುಗುತ್ತಿದೆ, ಕೈನ್ನೆ ಏಕೋ ಕಂಪಿಸು ತ್ತಿದೆ. ಏಕೋ ಸೆಖೆ. ಮುಖದಮೇಲೆ ಬೆವರು....ಎಷ್ಟು ದಿಟ್ಟಿಸಿದರೂ ಪಡುವಣ ಕೆಂಪು ಕರಗವಲ್ಲದು. ಗಳಿಗೆ ಕೋಟಿ ಮಣ ಭಾರದ ಬೇಡಿ ಕಾಲಿಗೆ ಬಿದ್ದಹಾಗೆ ಚಲಿಸುತ್ತಿದೆ. ಹೊತ್ತಿನ ಗತಿ ನಿಧಾನವಾದ ಹಾಗೇ, ಎದೆಯ ತುಡಿತ ವೇಗ ಗಳಿಸುತ್ತಿದೆ. 'ಥೂ ಹಾಳಾದ ಹೊತ್ತು !' ಒಲ್ಲದ ಮನಸಿನಿಂದ ಶಾಲೆಯಲ್ಲಿ ಕೂತ ಮಗುವಿನ ಹಾಗೆ ಸಿಡಿಗುಟ್ಟುತ್ತಿದೆ ಅವಳ ಮನಸು. ಬೇಸರವಾಗಿ ತಂಬೂರಿಯನ್ನು ತೆಗೆದುಕೊಂಡು ಎದೆಗೆ ಒರಗಿಸಿ ಕೊಂಡು ನಿಧಾನವಾಗಿ ಅದರ ತಂತಿಯನ್ನು ಮಿಡಿಯಲೆತ್ನಿಸಿದಳು .... ಅದೂ ಬೇಡ !

ಹೊರಗೆ ವರಾಂಡದಲ್ಲಿ ಹೆಜ್ಜೆ ಸಪ್ಪಳ. ಅವರೇ ! ತಾಯಿಯ ಕೈಲಿ ಮಾತಾಡುತಾ ಇದಾರೆ. 'ಇದಾಳೆಯೋ ಮನೆಯಲ್ಲಿ ? ಓ ಎಷ್ಟು ಚೆನ್ನಾಗಿದೆ ಅವರ ಧ್ವನಿ.' 'ಇದಾಳೆ' ತಾಯಿ ಉತ್ತರ ಕೊಟ್ಟರು. ಹೆಜ್ಜೆಯ ಸದ್ದು ದಿನಕ್ಕಿಂತ ವೇಗವಾಗಿ ಬರುವಂತೆ ಕೇಳುತ್ತಿದೆ. 'ನನ್ನ ಹಾಗೇ ಅವರೂ ಕಾದು ಬರುತ್ತಿರಬಹುದೇ ? ಇರಬೇಕು. ಅದಕ್ಕೇ ಇಷ್ಟು ವೇಗ. ಓ ! ಬಂದೇಬಿಟ್ಟರು.' ಮುಂದೆ ಮಾಡಿದ ಬಾಗಿಲು ಕಿರ್ರೆಂದು ತೆರೆಯಿತು. ಈ ಹೊತ್ತು ಅವರು ಹೇಗಿದಾರೋ ನೋಡಬೇಕು. ನಿಂತು ತಲೆಯೆತ್ತಿ ನೋಡಲೆತ್ನಿಸಿದಳು. ತಲೆ ನಿಲ್ಲವಲ್ಲದು, ಬಾಗುತ್ತದೆ ; ಹಾಗೇ ಕಣ್ಣು ನೋಡಿತು. ಮೊಳಕಾಲವರೆಗೆ ಬಂದ ರೇಷಿಮೆಯ ಜುಬ್ಬಾ, ಅಗಲವಾದ ಪಾಯಿಜಾಮು, ಚಿತ್ತಾರದ ಚಪ್ಪಲಿ ; ಯತ್ನಮಾಡಿ ತಲೆಯೆತ್ತಿ ನೋಡಿದಳು. ಎದೆ ತುಯ್ಯುತ್ತಿದೆ. ತೆಳುವಾದ ರೇಷ್ಮೆಯ ಮರೆಯಿಂದ ಕಾಣುವ ಹರವಾದ ಎದೆ, ಮೃದುವಾದ ತುಂಬು ತೋಳು, ಆ ಕೆಂಪು ತುಟಿ, ಕಾಡಿಗೆ ಹಚ್ಚಿದ

ಕಣ್ಣು, ಕತ್ತಿನವರೆಗೆ ಇಳಿಬಿದ್ದ ಕೂದಲು .... ಆ ನಿಂತ ಗಂಡುನಿಲುವು .... ಯಾವುದೋ ಕಾವು ಅವನ ಮೈಯಿಂದ ಮೂಡಿ ಬಂದು, ಇವಳ ಎದೆಯನ್ನು ತಾಗುತ್ತಿತ್ತು.

'ನಮಸ್ಕಾರ.'

'ನಮಸ್ಕಾರ, ಪ್ರಾಕ್ಟೀಸು ಪ್ರಾರಂಭಮಾಡೋಣವೋ?' ಎಂದು ಕೇಳಿದ, ಒಳಗೆ ಬಂದು ರತ್ನಗಂಬಳಿಯಮೇಲೆ ಕುಳಿತ ಮೂರ್ತಿ. ಮೂಲೆಯಲ್ಲಿದ್ದ ತಬಲವನ್ನು ಹತ್ತಿರ ಎಳೆದುಕೊಳ್ಳುತ್ತಾ.

'ಅಬ್ಬಾ! ಇಷ್ಟೇಕೆ ಆತುರ.... ಆ ಗಳಿಗೆಗಾಗಿ ಇವರೂ ಆತುರ ವಾಗಿದಾರೆಯೋ?' ಗಳಿಗೆ!....ಅವಳ ಮೈ ಒಮ್ಮೆ ಕಂಪಿಸಿತು, ಗಾಳಿ ಸೋಕಿದ ಚಿಗುರಿನ ಹಾಗೆ.

'ಸ್ವಲ್ಪ ಹೊತ್ತು ಬಿಟ್ಟು....' ಅವಳ ಮಾತು ಮುಗಿಯುವುದರೊಳ ಗಾಗೇ ಮೂರ್ತಿ ಹೇಳಿದ: 'ಇಲ್ಲ, ಇವತ್ತು ಸ್ವಲ್ಪ ಬೇಗ ಮುಗಿಸಿ ಹೋಗಬೇಕು. ಬೇರೆ ಕೆಲಸವಿದೆ.' ತನ್ನ ಮೈಯ ಹಾಗೇ ಅವನ ಧ್ವನಿಯೂ ನಡುಗುತ್ತಿರುವಹಾಗೆ ತೋರಿತು ಅವಳಿಗೆ. ಏನೋ ಗುಟ್ಟು ತಿಳಿದಹಾಗೆ ನಕ್ಕಿತು ಅವಳ ಮನಸು. ಅಬ್ಬಾ ಎಷ್ಟು ಆತುರ!

ನಿಧಾನವಾಗಿ ತೂಗುತ್ತಿದ್ದ ಜಡೆಯನ್ನು ಮುಡಿಯಲ್ಲಿ ಸಿಕ್ಕಿಸಿ, ಬೆನ್ನಹಿಂದೆ ಜೋಲುತ್ತಿದ್ದ ಸೆರಗನ್ನು ಇನ್ನಷ್ಟು ನಿಧಾನವಾಗಿ ತೆಗೆದು ಜೋಡಿಸಿ ಎದೆ ಕಂಡೂ ಕಾಣದಹಾಗೆ ಸೊಂಟಕ್ಕೆ ಬಿಗಿದು, ನೆರಿಗೆಯನ್ನು ಸರಿಮಾಡಿ ಕೊಂಡು, ಗೆಜ್ಜೆಯನ್ನು ಆದಷ್ಟು ಕಾಲು ಕಾಣುವಹಾಗೆ ಕಟ್ಟಿಕೊಳ್ಳುತ್ತಾ, ಬಗ್ಗಿದ ಹಾಗೆಯೇ ಮೂರ್ತಿಯನ್ನೊಮ್ಮೆ ಇಣಿಕಿನೋಡಿದಳು ಲತಾ. ತಬಲದಮೇಲಿನ ಅವನ ನೀಳವಾದ ಕೈಬೆರಳು ಕಂಪಿಸುತ್ತಿದೆಯೇ? ....

'ಥಾ' ಎಂದಿತು ತಬಲ; 'ಘಲ್' ಎಂದಿತು ಗೆಜ್ಜೆಗಾಲು. ಎದೆ ತೂಗಿತು; ಮೈ ಏನನ್ನೋ ಬಯಸಿ ಕಂಪಿಸಿತು. 'ಥಾಥೈ, ಥಾಥೈ ಥಾಥೈ' ತಬಲದ ಮೇಲೆ ಕೈ ವೇಗವಾಗಿ ಓಡುತ್ತಿತ್ತು. ಸ್ವಲ್ಪ ಹೊತ್ತು ಪಾದಗತಿಯ ಅಭ್ಯಾಸವಾಯಿತು.

'ಇನ್ನು ನಿನ್ನೆ ಹೇಳಿಕೊಟ್ಟಿದ್ದನ್ನು ಅಭ್ಯಾಸ ಮಾಡೋಣ' ಎಂದ ಮೂರ್ತಿ.

ಹತ್ತಿಸಿದ ನೀಲಿಯ ಬಣ್ಣದ ಬಲ್ಬು ಅವಳನ್ನೇ ನೋಡಿ ಕಣ್ಣು ಹಾರಿಸಿತು.

ಮೈ ಏಕೋ ಬೆವರುತ್ತಿದೆ ; ಭಾರವಾಗಿ ಬಿಗಿದು ನಿಲ್ಲುತ್ತಿದೆ. ತೊಡೆಯಮೇಲೆ ಅಡಿ ನಿಲ್ಲಿಸಲು ಯತ್ನಿಸಿದಳು. ಏಕೋ ಜಾರುತ್ತಿದೆ ; ಉಸಿರಿನ ವೇಗಕ್ಕೆ ಮೈ ಕಂಪಿಸಿ 'ನಾ ಬಾಗಲಾರೆ' ಎನ್ನುತ್ತಿದೆ. ಎಷ್ಟು ಯತ್ನಮಾಡಿದರೂ ಭಂಗಿ ಸರಿಯಾಗದು.

'ಏಕೆ ? ನಿನ್ನೆ ತೋರಿಸಲಿಲ್ಲವೇ ?....ಹು....ಹೀಗಾದರಾಗೋದಿಲ್ಲ. ಮೈ ಬೆಣ್ಣೆಯ ಹಾಗೆ ಬಳುಕಬೇಕು. ಎಲ್ಲಿ ತೊಡೆಯಮೇಲೆ ಕಾಲಿಟ್ಟು ನೇರವಾಗಿ ನಿಂತುಕೋ.' ನಿಂತ ತನ್ನನ್ನು ನೋಡುವ ಆವರ ಕಣ್ಣಲ್ಲಿ ಅದೇನದು ಎಂದೂ ಇಲ್ಲದ ಹೊಳಪು !

ಅವಳ ಮೈ ಅವನ ಕೈಗಾಗಿ ಕಾದಿತ್ತು. ಅದಿಲ್ಲದೆ ಮಣಿಯುವುದಿಲ್ಲ ಎನ್ನುತ್ತಿತ್ತು. 'ನಿನ್ನೆ ತೋರಿಸಿದ್ದು ಸರಿಯಾಗಿ ಗೊತ್ತಾಗಲಿಲ್ಲ ಮೇಸ್ಟರೇ' ಮಾತು ತಡೆತಡೆದು ಬಂತು.

ಮೂರ್ತಿ ತಾನೇ ಎದ್ದು ಬಂದ. ಲತೆಯ ಮೈಯೊಮ್ಮೆ ಕಂಪಿಸಿತು. ಎದೆಯಲ್ಲಿ ಯಾವುದೋ ಬಿರುಗಾಳಿ ಹುಚ್ಚೆದ್ದು ಬೀಸಲಾರಂಭಿಸಿತು. ಹತ್ತಿರ ಬರುವ ಅವನ ಹೆಜ್ಜೆ ಅವಳ ಎದೆಯ ಕದವನ್ನು ತೆರೆಯುತ್ತಿದೆ. ಮೈ ಏನನ್ನೋ ನಿರೀಕ್ಷಿಸಿ ಬಿರುಸಾಗುತ್ತಿದೆ. ಹತ್ತಿರ ಬಂದ. ತೋಳು ಏನನ್ನೋ ಕಾಯುತ್ತಿದೆ. ತೋಳು ಹಿಡಿದ ಅವನ ಕೈ ಬೆರಳು ಅವಳ ಎದೆಯನ್ನು ಬಿರುಸಾಗಿ ಮಿಡಿಯುತ್ತಿದೆ. ತಲೆ ಸುತ್ತುತ್ತಿದೆ ರಾಗದ ವೇಗಕ್ಕೆ. ಸೊಂಟವನ್ನು ಸರಿಯಾಗಿ ಬಾಗಿಸಲೆಂದು ಅವನು ಬೆನ್ನಿಗೆ ಕೈಕೊಟ್ಟು, ಇನ್ನೊಂದು ಕೈಯನ್ನು ಸೊಂಟಕ್ಕೆ ಇಟ್ಟ ; ಸೋತು ಬಿದ್ದಳು ಲತಾ ಅವನ ತೋಳಲ್ಲಿ. ತುಟಿ ಏನನ್ನೋ ಬಯಸಿ ಕಂಪಿಸುತ್ತಿತ್ತು. 'ಏಕೆ?' ಅವನ ಧ್ವನಿಯಲ್ಲಿ ಆಶ್ಚರ್ಯವಿತ್ತು. ಅವಳು ಕೆಳಗೆ ಬೀಳದಂತೆ ಅವನ ತೋಳು ಅವಳನ್ನು ಬಿಗಿಯಾಗಿ ಹಿಡಿದಿತ್ತು. ಇನ್ನಷ್ಟು ಬಿಗಿಯಾಗಿ, ಇನ್ನಷ್ಟು ಬಿಗಿಯಾಗಿ ಎನ್ನುತ್ತಿತ್ತು ಅವಳ ಮನಸು. ಹಾಗೇ ತನ್ನ ತಲೆಯನ್ನು ಅವನ ಎದೆಗೆ ಒತ್ತಿ ಕಣ್ಣು ಅರಳಿಸಿ ನೋಡಿದಳು........ಆ ತುಂಬುತುಟಿ........

ಅವಳ ವರ್ತನೆ ಮೂರ್ತಿಗೆ ಅರ್ಥವಾಗಲಿಲ್ಲ. ಚಕಿತನಾಗಿ ತೋಳಲ್ಲೊರಗಿದ ಅವಳ ಮುಖವನ್ನೇ ನಿರೀಕ್ಷಿಸಿದ. ಕೆನ್ನೆಯ ಮೇಲೆ ಕೆಂಪು ಬಿಳುಪು ಸುಳಿಯುತ್ತಿದೆ. ತುಟಿ ಕಂಪಿಸುತ್ತಿದೆ. ಅವಳ ಕಣ್ಣನ್ನೇ ದಿಟ್ಟಿಸಿ ನೋಡಿದ. ಏನೋ ಒಂದು ಹೊಸ ಹೊಳಪಿತ್ತು ಕಣ್ಣಲ್ಲಿ; ಅದರಲ್ಲಿ ಪ್ರಬುದ್ಧ ಯೌವನದ ಮುಗ್ಧತೆಯಿಲ್ಲ. ಏನೋ ಮಾದಕವಾದ ಮಿಂಚಿದೆ, ಆಹ್ವಾನದ ಬೆಳಕಿದೆ .... ಅವನರಿಯದ ಹಾಗೆ ಅವಳ ತೋಳು ಅವನ ಬೆನ್ನು ಬಳಸಿ ಬಿಗಿಯುತ್ತಿತ್ತು.... ಏನಿದು, ಏನಿದು ಎಂದು ಅವನ ಮನಸು ಕೆರಳುತ್ತಿತ್ತು. ಅವಳ ತುಟಿಯೊಮ್ಮೆ ಮಂತ್ರಸ್ಪರ್ಶಕ್ಕೆ ಅರಳುವ ಮೊಗ್ಗಿನಹಾಗೆ ಅರಳಿ, ಕಿರುನಗೆ ಸೂಸಿತು. ಅದೂ ಮಾದಕವೇ, ಅದರಲ್ಲೂ ಆಹ್ವಾನವೇ! ಕಣ್ಣು ಅರಳಿ, ಏನನ್ನೋ ಕರೆದು ಮೃದುವಾಗಿ ಮುಚ್ಚಿತು. ಮುಚ್ಚಿದ ರೆಪ್ಪೆ ಕಂಪಿಸುತ್ತಿದೆ. ಏಕೆ? ಏಕೆ? ತೋಳತೆಕ್ಕೆಯಲ್ಲೊರಗಿದ ಅವಳ ಮೈ, ಶ್ರುತಿ ಮಾಡುತ್ತಿರುವ ತಂಬೂರಿಯ ತಂತಿಯ ಹಾಗೆ ಬಿಗಿಯುತ್ತಿದೆ; ಮೈ ಭಾರವಾಗುತ್ತಿದೆ, ನಸು ನಡುಗುತ್ತಿದೆ. ಹಣೆಯಮೇಲೆ ಬೆವರ ಹನಿ, ಉಸಿರಿನ ವೇಗವಾದ ಗತಿ. ಅದೂ ಎಷ್ಟು ಶಾಖವಾಗಿ! ಏಕೆ? ಏಕೆ? ....

ನಿಶ್ಶಬ್ದ ನೀರವ ನಿಶೆಯಲ್ಲಿ ಗಂಟೆ ಬಾರಿಸಿದ ಹಾಗೆ ಕೇಳಿಬಂತು ಯಾವುದೋ ರಾಗದ ಮೊರೆತ. ಅರ್ಥವಾಯಿತು. ಅವನ ಮೈಯೊಮ್ಮೆ ಕಂಪಿಸಿ ಬಿಗಿದುಕೊಂಡಿತು. ತುಟಿ ಔಡು ಕಚ್ಚಿತು. ಮೆಲ್ಲಗೆ ಅವಳನ್ನು ಎತ್ತಿ ಸೋಫಾದ ಮೇಲೆ ಮಲಗಿಸಿದ. ಅವಳು ಏನನ್ನೋ ಕಾಯುತ್ತ ಹಾಗೇ ಕಣ್ಣುಮುಚ್ಚಿ ಮಲಗಿದ್ದಳು. ಅವಳ ಮೈ, ತುಟಿ, ಎಲ್ಲವೂ ಏನನ್ನೋ ಕಾಯುತ್ತಿದ್ದುವು....ಮೂಲೆಯಲ್ಲಿ ತಂಬೂರಿ ಮಲಗಿತ್ತು. ಒಮ್ಮೆ ಅವಳನ್ನು, ಒಮ್ಮೆ ತಂಬೂರಿಯನ್ನು ದಿಟ್ಟಿಸಿದ ಮೂರ್ತಿ. ಎರಡೂ ಯಾವುದೋ ಮಿಡಿಯುವ ಬೆರಳನ್ನು ಕಾಯುತ್ತ ಮಲಗಿದ್ದವು. ಎರಡನ್ನೂ ದಿಟ್ಟಿಸಿ ನೋಡಿ, ಬೆವರಿಡುತ್ತಿದ್ದ ಮುಖವನ್ನು ಒರೆಸಿಕೊಂಡು, ನಿಶ್ಶಬ್ದವಾಗಿ ಹಿಂದೆ ತಿರುಗಿ ನೋಡದೆ ಹೊರಟುಹೋದ ಮೂರ್ತಿ.

ಒಂದು ಗಳಿಗೆ, ಎರಡು ಗಳಿಗೆ, ತುಟಿ ಕಾದು ಬೇಸತ್ತಿತ್ತು. ಕಣ್ಣರೆಪ್ಪೆ 'ಇನ್ನು ನಾನು ಮುಚ್ಚಿ ಮಲಗಲಾರೆ' ಎಂದಿತು. ಕಣ್ಣರಳಿಸಿ ನೋಡಿದಳು. ಕೋಣೆಯಲ್ಲಿ ಯಾರೂ ಇಲ್ಲ!........

ನೀಲಿಯ ಬಲ್ಬು ಕಣ್ಣು ಹೊಡೆಯಿತು.

'ತನ್ನನ್ನು ಹಾಗೆ ಮಲಗಿಸಿ ಏಕೆ ಹೊರಟುಹೋದರು ? ಏನಾಯಿತು ? ಏನಾಯಿತು ?' ರಾತ್ರಿ ಕಳೆಯಲಾಗದೆ ಕಳೆಯಿತು ; ಹಗಲಾಯಿತು ; ಮಧ್ಯಾಹ್ನವಾಯಿತು ; ಬಿಸಿಲು ಮಾಗಿತು. ಒಂದೇ ಪ್ರಶ್ನೆ : 'ಹೀಗೇಕಾಯಿತು ? ಹೀಗೇಕಾಯಿತು ?' ಮನಸು ಆಸೆ, ನಿರಾಸೆ, ಸಂದೇಹ, ಬಯಕೆ, ಕಾತುರತೆಗಳ ಕೋಟಿ ಉಯ್ಯಾಲೆಯಲ್ಲಿ ತೂಗುತ್ತಿತ್ತು ; ನೂರು ತೊಡಕುಗಳ ಬಿಡಿಸಲಾಗದ ಕಗ್ಗಂಟಿನಲ್ಲಿ ಸಿಲುಕಿ ನರಳುತ್ತಿತ್ತು. ಅವರಿಗೆ ತನ್ನಮೇಲೆ ಬಯಕೆ ಇರಲಿಲ್ಲವೆ ? ಇದ್ದರೆ ಹಾಗೆ ಬಿಟ್ಟುಹೋದುದೇಕೆ ? ಸೋತ ಮನಸು ಸುಮ್ಮನೆ ಸಂದೇಹದ ಹಂಜಿಯನ್ನು ಹಿಂಜುತ್ತಿತ್ತು. ಮಾಗಿದ ಬಿಸಿಲು ಕೆಂಪಿನಿಂದ ಹಳದಿಯಾಗಿ, ಮುಂಕು ಬಂಗಾರವಾಗಿ ಕತ್ತಲೆಗೆ ತಿರುಗಿತು.

'ಈಗ ಬರುತ್ತಾರೆಯೇ, ಬರುತ್ತಾರೆಯೇ, ಬಂದವರೆ ನನ್ನನ್ನು ಎತ್ತಿ ತಮ್ಮ ತೋಳಲ್ಲಿ ಮಲಗಿಸಿಕೊಳ್ಳುತ್ತಾರೋ, ತಿರಸ್ಕಾರವಾಗಿ ನೋಡುತ್ತಾರೋ ? ಛೆ ! ಅವರಿಗೆ ನನ್ನಮೇಲೆ ತಿರಸ್ಕಾರವೇಕೆ ? ನಿನ್ನೆ ಆದದ್ದು ತುಂಬಾ ಹಠಾತ್ತಾಗಿ. ಆದ್ದರಿಂದ ಬೆಚ್ಚಿರಬಹುದು........ಈಗ ಬರುತ್ತಾರೆ, ಈಗ ಬರುತ್ತಾರೆ' ಎಂದು ಮನಸು ಸಮಾಧಾನ ಹೇಳಿಕೊಳ್ಳುತ್ತಿತ್ತು.

ಕತ್ತಲಾಯಿತು. ಯಾರೋ ಹೊರಗಡೆ ಗೇಟು ತೆರೆದರು. ಯಾರೋ ಮೆತ್ತಗೆ ಮೆಟ್ಟಲು ಹತ್ತುತ್ತಿದಾರೆ. ಹೊರಗಡೆ ಬಂದ ತಾಯಿಯನ್ನು ಏನೋ ಕೇಳಿದರು. ಏನೋ ಸರಿಯಾಗಿ ಕೇಳದು : 'ಒಳಗೆ ಇದಾಳೆ.' ಅವರೇ, ಅವರೇ........ ಅವಳ ಹೃದಯ ಅಧೀರವಾಯಿತು, ಕಣ್ಣು ಕಾತರಿಸಿತು. ಮೈ—'ಎಂದೂ ಇಲ್ಲದೆ ಇವತ್ತೇಕೆ ಇಷ್ಟು ಮೆತ್ತಗೆ ಬರುತ್ತಿದಾರೆ. ದಿನದಂತೆ ಹೆಜ್ಜೆ ಸಪ್ಪಳವೇ ಆಗದು.' ಕಾಲಸದ್ದು ಬಾಗಿಲ ಹೊರಗಡೆ ಕೇಳಿತು. 'ಅವರೇ, ಅವರೇ, ಹೇಗಿದ್ದಾರೋ ಅವರು ?' ಬೇಗ ಎದ್ದುಹೋಗಿ ಆಸೆ, ಕನಸು, ಬಯಕೆ ತುಂಬಿದ ಹೃದಯದಿಂದ ಬಾಗಿಲು ತೆರೆದು ಕಣ್ಣರಳಿಸಿ ನೋಡಿದಳು........

ನೋಡಿದಳು........ನೋಡಿದಳು.

ಅವರಲ್ಲ....ಅವರ ಮನೆ ಹುಡುಗ !

'ಇವತ್ತು ಬರಲಿಕ್ಕಾಗಲಿಲ್ಲವಂತೆ. ನಿಮಗೇ ಈ ಚೀಟಿ ಕೊಟ್ಟು ಬಾ ಎಂದರು' ಎಂದು ಹೇಳಿ ಅವಳ ಕೈಲಿ ಚೀಟಿ ಕೊಟ್ಟು ಹುಡುಗ ಹೊರಟು ಹೋದ.

'ಚೀಟಿ ತೆಗೆಯಲೇ, ಬೇಡವೆ? ಏನು ಬರೆದಿದಾರೋ, ನನ್ನನ್ನು ಒಪ್ಪಿ ಕರೆದಿರಬಹುದೇ? ಏನಿದೆ ಈ ಚೀಟಿಯಲ್ಲಿ?'

ಹತ್ತಾರು ಸಲ ತೂಗಿ ನೋಡಿ ಬಿಚ್ಚಿದಳು. ಆಸೆ ತುಂಬಿದ ಕಣ್ಣಿಗೆ ಅಕ್ಷರವೇ ಕಾಣಿಸದು!

ನಡುಗುವ ಕೈ, ಕುಣಿಯುವ ಎದೆಯಿಂದ ಕಾಗದ ಬಿಚ್ಚಿ ನೋಡಿದಳು. ಅದರಲ್ಲಿದ್ದುದು ಮೂರೇ ಸಾಲು.

"ಕ್ಷಮಿಸಬೇಕು. ನನ್ನ ಭಾವನೆಯನ್ನು ನೀವು ತಪ್ಪು ತಿಳಿದುಕೊಂಡಿರಿ. ನನಗೆ ಬೇಕಾದುದು ನಿಮ್ಮ ಮೈಯಲ್ಲ, ನಿಮ್ಮಲ್ಲಿಯ ಕಲೆ. ನಿಮಗೆ ನಾನು ಬೇಕಾಯಿತು. ಇನ್ನು ಬರಲಾರೆ."

ಅವಳ ಕಾಲು ಕುಸಿಯಿತು. ಎದೆ ಇದ್ದಕ್ಕಿದ್ದಹಾಗೇ ಬರಿದಾಗಿ, ಭಾರವಾಯಿತು. ಕಣ್ಣು ಸೋತು ಮುಚ್ಚಿತು.

ಹೊರಗಡೆ ತಾಯಿ ಕೇಳಿದರು: "ಇವತ್ತು ಮೇಸ್ಟರು ಏಕೆ ಬರಲಿಲ್ಲವೇ ಲತಾ?"

ಚಾಟಿಯಿಂದ ಹೊಡೆದಹಾಗಾಯಿತು ಲತಾಗೆ ತಾಯಿಯ ಆ ಪ್ರಶ್ನೆ ಕೇಳಿ. ಏನೂ ಉತ್ತರ ಕೊಡಲಿಲ್ಲ. ಕಣ್ಣು ಕಂಬನಿ ತುಂಬಿತ್ತು.

ಮಾತಾಡದೆ ಸೋಫಾದ ಮೆತ್ತೆಯಲ್ಲಿ ಮುಖ ಮುಚ್ಚಿದಳು.

# ಗೆಲುವಿನ ಸೋಲು

ನಿರಂಜನ ಮೇಲ್ದುಟಿಯ ಮೇಲೆ ಗೆರೆಯಾಗಿ ಕತ್ತರಿಸಿದ ಮೀಸೆಯನ್ನು ಠೀವಿಯಿಂದ ಸವರಿಕೊಂಡ. ಅಂತೂ ಅವನು ನಾಲ್ಕಾರು ತಿಂಗಳು ಮಸೆದು ಮಾಡಿದ ತಂತ್ರ ಸಫಲವಾಗುವ ಸೂಚನೆ ಕಂಡಿತ್ತು. ಅವನಿಗೊಂದು ಹೆಮ್ಮೆಯಿತ್ತು. ಮಟ್ಟಸವಾದ ಎತ್ತರ, ಬಲವಾಗಿ ಹುರಿಗೊಂಡ ಕೈಕಾಲು, ಹರವಾದ ಎದೆ, ಗಂಡುತನದ ಲಕ್ಷಣಕ್ಕೆ ಅಳತೆಯಾಗಿ ಕೆತ್ತಿದ ಮುಖ, ಗುಂಗುರು ಕೂದಲು, ಷೆರ್ವಾನಿ, ಸುರ್ವಾಲ್ ಹಾಕಿ, ತಲೆಗೆ ಗಾಂಧಿ ಟೋಪಿಯಿಟ್ಟು, ಕುಡಿಗಣ್ಣಿನಲ್ಲಿ ಕಿರುನಗೆ ಮಿನುಗಿಸುತ್ತಾ ನಿಂತರೆ ಕಾಥೇವಾರಿ ಕಾಮ, ಅಬು ಬೆಟ್ಟದಿಂದ ಇಳಿದು ಬಂದ ಹಾಗೇ ಕಾಣಿಸುತ್ತಿದ್ದ. ಇದರ ಜೊತೆಗೆ ಹತ್ತಾರು ಒಳ್ಳೆ ಕಥೆ ಬರೆದು ಹೆಸರುವಾಸಿಯಾಗಿದ್ದ. ಮಾತಿನಲ್ಲಿ ತುಂಬಾ ಸರಸಿ. ಇಂಥ ತನಗೆ ಸೋಲದ ಹೆಣ್ಣು ಯಾರೂ ಇಲ್ಲ ಎಂಬ ಹೆಮ್ಮೆ ಅವನಿಗಿತ್ತು. ಇದಕ್ಕೆ ಸರಿಯಾಗಿ ನಾಲ್ಕಾರು ಜನ ಹುಡುಗಿಯರ ಕೃಪಾಕಟಾಕ್ಷ ಬಿದ್ದು, ಪ್ರಣಯ ಪ್ರಸಾದ ದೊರಕಿ, ಈ ಹೆಮ್ಮೆಗೆ ಕೋಡು ಮೂಡಿತ್ತು.

ಇವನ ಕಣ್ಣು ಕಾಮಾಕ್ಷಮ್ಮನ ಮೇಲೆ ಬಿತ್ತು. ಕಾಮಾಕ್ಷಮ್ಮನು ವಿವಾಹಿತೆ. ವಿದ್ಯಾವತಿ. ಹೊಸಕಾಲದಾಕೆಯಾದುದರಿಂದ ಪರಿಚಯದವರಲ್ಲಿ ಸಲಿಗೆ ಹೆಚ್ಚು. ಆಕೆಯ ಗಂಡನಿಗೆ ಸೆಕ್ರೆಟೇರಿಯಟ್ಟಿನಲ್ಲಿ ದೊಡ್ಡ ಕೆಲಸ. ಕೈತುಂಬ ಸಂಬಳ ಬರುತ್ತಿತ್ತು. ಮೇಲುತ್ಪತ್ತಿಯೂ ಚೆನ್ನಾಗಿತ್ತು. ಅವನೂ ಹೊಸ ಕಾಲದವನು. ಕೈಹಿಡಿದವಳು ಪರರೊಂದಿಗೆ ಮಾತಾಡಿದರೇ

ಕೆಟ್ಟುಹೋದಾಳೆಂದು ಹೆದರುವ ಸಂಪ್ರದಾಯ ಶರಣನಲ್ಲ. ಹೆಣ್ಣು ಅಂತಃಪುರ ಕುಸುಮವಾಗಿರಬೇಕೆಂಬ ಸ್ವಾರ್ಥಸಂಪ್ರದಾಯದವನಲ್ಲ. ಅವನಿಗೂ ಕಲೆ, ಕಲಾವಿದರಲ್ಲಿ ಅಭಿಮಾನ, ಆಸಕ್ತಿಗಳಿತ್ತು. ಹೀಗೆ – ಗಂಡನ ಆದಾಯ ಕಾಮಾಕ್ಷಮ್ಮನ ಅಭಿರುಚಿಗೆ ಅನುವಾಗಿತ್ತಾಗಿ ಅವರ ಮನೆ ಸಣ್ಣದೊಂದು ಕಲಾಲಯ. ಊರಿನ ಕಲಾವಿದರಿಗೆಲ್ಲಾ ಅವರ ಮನೆಯಲ್ಲಿ ಕಾಫಿ, ತಿಂಡಿ ಉಪಚಾರ ನಡೆಯುತ್ತಿತ್ತು. ಒಂದೆರಡು ಸಲ ಮನೆಗೆ ಹೋಗಿಬಂದಮೇಲೆ, ಹೊಸಬರಿಗೂ ಸ್ವಂತ ಮನೆಯಾಗುತ್ತಿತ್ತು ಕಾಮಾಕ್ಷಮ್ಮನವರ ಮನೆ. ಆಕೆಯ ಗಂಡ ಊರ ಕಲಾವಿದರೆಲ್ಲಾ ತನ್ನ ಪತ್ನಿಯ ಅಭಿರುಚಿ, ತನ್ನ ಕಲಾಪ್ರೇಮ ಹೊಗಳುವುದನ್ನು ಕಂಡು ಸ್ವರ್ಗಕ್ಕೆ ಮೂರು ಬೆಟ್ಟು ಉಳಿದವನಂತೆ ಸಂತೋಷಪಡುತ್ತಿದ್ದ.

ಒಮ್ಮೆ ಹೀಗೇ ನಿರಂಜನನಿಗೂ ಅವರ ಮನೆಯಿಂದ ಆಹ್ವಾನ ಬಂತು, ಪರಿಚಯದವರೊಬ್ಬರು ಅವನ ಕಥೆಗಾರಿಕೆಯನ್ನು ಹೊಗಳಿದ್ದರ ಫಲವಾಗಿ. ನಿರಂಜನ ಎದೆಯುಬ್ಬಿಸಿಕೊಂಡು ಹೋದ.

ಆ ಕಾಮಾಕ್ಷಮ್ಮನ ಗಂಡ ಆಕಸ್ಮಿಕವಾಗಿ ಯಾರೋ ಮೇಲಧಿಕಾರಿಗಳ ಜೊತೆಯಲ್ಲಿ ಪ್ರವಾಸ ಹೋಗಿದ್ದುದರಿಂದ ಆತಿಥ್ಯವನ್ನು ಕಾಮಾಕ್ಷಮ್ಮನವರೇ ಮಾಡಿದರು. ನಿರಂಜನ ನೋಡಿದ. ಕೂತ ಕೋಣೆಯಲ್ಲಿ ಗೋಡೆಯ ಮೇಲೆ ಒಂದೆರಡು ಉತ್ತಮ ತೈಲ ಚಿತ್ರ. ಮೂಲೆಯಲ್ಲಿ ಕಂಚಿನ ನಟರಾಜ. ಹೂವಿಟ್ಟ ಕುಂಡ. ಮೊಘಲರ ಕಾಲದ ಕೆತ್ತನೆಯ ಹಿತ್ತಾಳೆಯ ಪಾತ್ರೆ. ಚೀಣಾ, ಜಪಾನ್, ಪರ್ಷಿಯಾ ದೇಶಗಳ ಉತ್ತಮ ಕಲಾವಸ್ತುಗಳು ಗಾಜಿನ ಬೀರುವಿನಲ್ಲಿ, ಇಷ್ಟಿದ್ದರೂ ಕೋಣೆ ಉಗ್ರಾಣದಹಾಗಿರಲಿಲ್ಲ; ಅವನ್ನು ಹೊಂದಿಸಿಟ್ಟ ಜಾಣ್ಮೆ ಅಂಥದು. ಇವನ್ನು ನೋಡಿ ಸವಿಯುವುದರಲ್ಲೇ ಮಗ್ನನಾದ ನಿರಂಜನನಿಗೆ ಕಾಮಾಕ್ಷಮ್ಮ ಕೋಣೆಯೊಳಗೆ ಬಂದುದು ಗೊತ್ತಾಗಲಿಲ್ಲ; ಸದ್ದಾಗದಂಥ ರತ್ನಗಂಬಳಿ ನೆಲಕ್ಕೆ. ಅವರೇ ಸ್ವಲ್ಪ ಸದ್ದು ಮಾಡಿದರು. ನಿರಂಜನ ತಿರುಗಿ ನೋಡಿದ. ಓ! ಎಂಥ ರೂಪ!! ಸುತ್ತಲಿದ್ದ ಸುಂದರ ಕಲಾವಸ್ತುಗಳಿಗೆ ಮೆರುಗು ಕೊಡುವಂಥ ರೂಪ, ಆಕೆಯದ್ದು. ಕಾಮಾಕ್ಷಮ್ಮ ರೂಪವಂತೆ ಎಂದು ಕೇಳಿದ್ದ ನಿರಂಜನನಿಗೆ, ತನ್ನ ಕಣ್ಣನ್ನು ನಂಬುವುದೇ ಅಸಾಧ್ಯವಾಯಿತು. ಆಕೆಯ ರೂಪ ಬಂಗಾರದ ಬಣ್ಣದ್ದಲ್ಲ,

ಪ್ರಮಾಣಬದ್ಧವಾಗಿ ಬೆಳೆದ ಮೈಯಿಸಮ. ಶ್ಯಾಮಲವರ್ಣವಾದರೂ, ಕಂಡೊಡನೆ ಮತ್ತೇರಿಸುವ ಮದ್ಯಪಾತ್ರೆ ಆಕೆಯ ರೂಪ, ಚಂಚಲ ಕೃಷ್ಣನೇತ್ರ. ನಕ್ಕರೆ ಗುಳಿಬೀಳುವ ತುಂಬುಗೆನ್ನೆ, ಚುಂಬನಕ್ಕಾಗಿಯೇ ಎಂಬಂತೆ ಮುಂದೆ ಚಾಚಿದ ಗಲ್ಲ. ಸ್ಪರ್ಧೆ ಹೂಡಿದಂತೆ ಉಬ್ಬಿದ ಎದೆ – ಎಲ್ಲಕ್ಕೂ ಹೆಚ್ಚಾಗಿ, ಮೂರು ವರ್ಷ ಸಂಸಾರ ಮಾಡಿದ್ದರೂ, ಭೋಗದಿಂದ ಕಲುಷಿತವಾಗದೆ, ಹೊಸತನ ಉಳಿಸಿಕೊಂಡ ಮುಖಮುದ್ರೆ. ಆ ಅನಾಯಕತೆ – ಗಂಡು ಸೋಲಲು ಇನ್ನೇನು ಬೇಕು; ನಿರಂಜನನೂ ಸೋತುಹೋದ.

ಕಂಡಕೂಡಲೇ ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ಕಾತರಿಸತೊಡಗಿದ ನಿರಂಜನ. ಮೊದಲದಿನದ ಪರಿಚಯದ ಮಾತುಕಥೆಯಾಗಿ, 'ಬಿಡುವಾದಾಗ ನಿಮ್ಮ ಕಥೆ ತೋರಿಸಿ' ಎಂದರು ಕಾಮಾಕ್ಷಮ್ಮ. ನಿರಂಜನ 'ಆಗಲಿ, ಕಳಿಸುತ್ತೇನೆ' ಎಂದ, 'ಕಳಿಸಬೇಡಿ. ನೀವೇ ತಂದು ಓದಿ. ಕಥೆಗಾರರೇ ಓದಿದರೆ ಕಥೆಯ ಸವಿ' ಎಂದಳು. ಮಲಗುವವನಿಗೆ ಹಾಸಿಗೆ ಹಾಸಿಕೊಟ್ಟ ಹಾಗಾಯಿತು. ಆಕೆಯ ಮಾತು ಎಷ್ಟು ಮೃದು! ಆ ಮೃದುತ್ವದಲ್ಲಿ ಎಂಥ ಒತ್ತಾಯ. 'ಆಗಲಿ' ಎಂದ ನಿರಂಜನ. ಅಂತೂ ಅವರ ಮನೆಗೆ ಮತ್ತೆ ಹೋಗುವುದಕ್ಕೆ ಹಾದಿಯಾಯಿತಲ್ಲಾ ಎಂದು ಸಮಾಧಾನವಾಯಿತು. ಒಮ್ಮೆ ಆಕೆಯ ಕಣ್ಣಿನಲ್ಲಿ ತನ್ನ ರೂಪ ಬಿಂಬಿಸುವಹಾಗೆ, ನಿಂತು ನಮಸ್ಕಾರಮಾಡಿ ಹೊರಬಂದ.

ಅಂದಿನಿಂದ ನಿರಂಜನನ ಬೇಟೆ ಆರಂಭವಾಯಿತು. ಹೊಸ ಕಥೆ ಬರೆದ ಕೂಡಲೇ ಪ್ರಥಮ ವಾಚನ ಆಕೆಯ ಇದಿರು. ಅವರ ಮನೆಗೆ ಹೋಗುವಾಗ ಇನ್ನಿಲ್ಲದಷ್ಟು ಹುಷಾರಾಗಿ ಬಟ್ಟೆ ಆರಿಸಿ ಹಾಕಿಕೊಂಡು ಕ್ರಾಪು ತೀಡಿಕೊಂಡು ಹೋಗುತ್ತಿದ್ದ. ಹೋಗಿಬರುವುದು ಹೆಚ್ಚಾದಹಾಗೆ ಅವನ ದಾಹ ಹೆಚ್ಚಾಯಿತೇ ಆಗಲಿ, ಪರಿಚಯದಿಂದ, ಬಳಕೆಯಿಂದ ಬಾಡಲಿಲ್ಲ. ಇವನು ಕಥೆ ಓದುವಾಗ ಅರಳುವ ಆಕೆಯ ಕಣ್ಣು, ಸೋಫಾಕ್ಕೆ ಒರಗಿ ಕೂತುದರಿಂದ ಮೇಲೆದ್ದು ಏರಿಳಿದ ಎದೆ, ಕಿಟಕಿ ತುಂಬಿದ ಕೋಣೆಯಲ್ಲಿ ಗಾಳಿ ಬೀಸಿದಾಗ, ಗಾಳಿಯ ಸ್ಪರ್ಶಕ್ಕೆ ಜೀವ ಬಂದಂತೆ ಸುಳಿವ ಕುರುಳು. ಒಂದೊಂದೂ ಅವನ ದಾಹಕ್ಕೆ ಅಗ್ನಿ ಸ್ಪರ್ಶ ಮಾಡಿಸುತ್ತಿದ್ದವು.

ಅರಳಿದ ತುಟಿಯನ್ನೊಮ್ಮೆ ಒತ್ತಬಹುದಾದರೆ ತುಂಬಿದ ಎದೆಯನ್ನೊಮ್ಮೆ ತಬ್ಬಬಹುದಾದರೆ........ಎಂದು ಬಯಸುತ್ತಿತ್ತು ಅವನ ಮನಸು. ಆದರೆ ಹೆಣ್ಣಿನ ಬೇಟೆಯಲ್ಲಿ ನಿರಂಜನ ಒಂದು ನೀತಿ ಅನುಸರಿಸುತ್ತಿದ್ದ. ಹೆಣ್ಣನ್ನು ಗೆಲ್ಲಲು ಗಂಡು ಸೋತರೂ ಸೋಲದಂತೆ ನಿರ್ಲಕ್ಷ್ಯವಾಗಿರಬೇಕು ಎಂಬುದು ಅವನ ಬೇಟೆಯ ವಿಧಿ. ಅದನ್ನೇ ಇಲ್ಲೂ ಅನುಸರಿಸುತ್ತಿದ್ದ; ಬಯಕೆ ಹೆಚ್ಚಿದ ಹಾಗೆ ಇವನ ಬಿಗುಮಾನವೂ ಹೆಚ್ಚಾಗುತ್ತಿತ್ತು. ಅವನ ಸ್ನೇಹದ ಕಾವು, ಎದೆಯಲ್ಲಿ ಉರಿಯುತ್ತಿದ್ದ ಪ್ರಣಯದ ಉರಿ ಕಾಮಾಕ್ಷಮ್ಮನಿಗೂ ತಗುಲುತ್ತಿದ್ದ ಹಾಗಿತ್ತು, ಆಕೆ ದಿನ ಕಳೆದಂತೆ ಇವನಲ್ಲಿ ಹೆಚ್ಚಿಸುತ್ತಿದ್ದ ಸಲಿಗೆಯನ್ನು ನೋಡಿದರೆ. ಆಗಾಗ ಮೈ ಸ್ಪರ್ಶವಾಗುತ್ತಿತ್ತು. ಇವನ ಮೈ ತಗುಲಿದೊಡನೆ ಹಾವು ತಗುಲಿದಂತೆ ಆಕೆಯ ಮೈ ಮುದುರುತ್ತಿತ್ತು; ಆಕೆಯ ಸ್ಪರ್ಶವಾದಂತೆ ಇವನ ನರ ಬಿರುಸಾಗುತ್ತಿತ್ತು. ಆಗಾಗ ಏನೋ ಒಂದು ಮಾದಕವಾದ ಮುಗುಳು ನಗೆ ಆಕೆಯ ತುಟಿಯ ಮೇಲೆ ಮೊಗ್ಗಾಗಿ ಅರಳುತ್ತಿತ್ತು. ತುಟಿಯಿಂದ ಸೂಸಿ ಬರುವ ಆ ನಗೆಯನ್ನು ತನ್ನ ತುಟಿಯಿಂದ ಹೀರಬೇಕು ಎನಿಸುತ್ತಿತ್ತು ನಿರಂಜನನಿಗೆ. ಆದರೆ ಕಾಣದವನ ಹಾಗೆ ಬಿಗಿದುಕೊಂಡು ಕೂಡುತ್ತಿದ್ದ.

ಒಮ್ಮೊಮ್ಮೆ ಕಾಮಾಕ್ಷಮ್ಮ ಬೇರೇನೂ ಭಾವವಿಲ್ಲದವರ ಹಾಗೆ ಇವನ ಅಲಂಕಾರದ ವಿಚಾರ ಮಾತಾಡಿ ಉತ್ತಮಗೊಳಿಸಲು ಸಲಹೆ ಕೊಡುತ್ತಿದ್ದಳು. ತನ್ನ ಕೆಲಸಕ್ಕೆ ಇವನ ಸಲಹೆ ತೆಗೆದುಕೊಳ್ಳುತ್ತಿದ್ದಳು. ಇವನು ಹೇಳಿದ್ದರಲ್ಲೆಲ್ಲಾ ಆಸಕ್ತಿ ತೋರುತ್ತಿದ್ದಳು. ಹೀಗಾದಾಗಲೆಲ್ಲಾ ನಿರಂಜನನಿಗೆ ಒಳಗೇ ಸಂತೋಷ, ಮಿಕ ಬಲೆಗೆ ಬೀಳುತ್ತಿದೆ ಎಂದು. ಆದರೂ ನಿರಾಸಕ್ತಿಯ ಸೋಗು ಧರಿಸುತ್ತಿದ್ದ.

ಒಂದು ದಿನ ನಿರಂಜನ ಹೊಸದಾಗಿ ಬರೆದ ಶೃಂಗಾರ ರಸಪೂರಿತವಾದ ಕಥೆಯೊಂದನ್ನು ಆಕೆಯ ಮುಂದೆ ಓದಿ ಹೇಳುತ್ತಿದ್ದ. ಅವನ ವರ್ಣನೆಯ ರಸಪೂರ್ಣ ವೇಗಕ್ಕೆ ಕಾಮಾಕ್ಷಮ್ಮ ಮೋಡಿಯಾದವರ ಹಾಗಾಗಿದ್ದಳು. ಕಥೆ ಮುಗಿಯುತ್ತ ಬಂತು. 'ಓ! ಎಷ್ಟು ಚೆನ್ನ' ಎಂದಳು. 'ಯಾವುದು?' ಎಂದ ನಿರಂಜನ ಅರ್ಥವಾಗದವನ ಹಾಗೆ. ಎತ್ತ ಕಡೆಯೋ ನೋಡುತ್ತಾ. ಕಾಮಾಕ್ಷಮ್ಮ 'ನಾವೂ ಹಾಗಿದ್ದರೆ' ಎಂದು ಹೇಳಿ ತಟಕ್ಕನೆ

ತಿರುಗಿ ನಿರಂಜನನ ಮುಖ ದಿಟ್ಟಿಸಿದಳು. ಆ ನೋಟದಲ್ಲಿದ್ದ ಆಹ್ವಾನದಿದಿರು, ಕರಗಿ ನೀರಾಗಿ ಹೋದ ನಿರಂಜನ. ಅವನ ಹತೋಟಿಗೆ ಮೀರಿ, ಅವನ ಕೈ ಆಕೆಯ ಕೈಯನ್ನು ಹಿಡಿದಿತ್ತು. ಬಲವಾಗಿ ಹಿಡಿದರೂ, ಇನ್ನಷ್ಟು ಬಲವಾಗಿ ಬಿಗಿಯಬೇಕೆಂಬ ಬಯಕೆ ಅವನ ಬೆರಳುಗಳಿಗೆ. ಒಂದು ಗಳಿಗೆ, ಒಂದು ಮರುನೋಟ; ಒಬ್ಬರ ತೋಳು ಇನ್ನೊಬ್ಬರ ಎದೆಯನ್ನು ಬಿಗಿದಿತ್ತು........

ಅಂದಿನಿಂದ ಕಾಮಾಕ್ಷಮ್ಮ ನಿರಂಜನನಾಕೆಯಾದಳು. ಬೇರಾರಿಗೂ ಸೋಲದ ನಾನು ನಿನಗೆ ಮಾತ್ರ ಸೋತೆ ಎಂಬ ಹಾಗಿರುತ್ತಿತ್ತು ಆಕೆ ಅವನೊಂದಿಗೆ ನಡೆದುಕೊಳ್ಳುತ್ತಿದ್ದ ರೀತಿ. ಮೊದಲೇ ಸರ್ವ ಸ್ತ್ರೀ ಮನೋ ಮನ್ಮಥ ತಾನು ಎಂದುಕೊಂಡ ನಿರಂಜನನಿಗೆ ಇದರಿಂದ ಊರು ಹಿಡಿಸದಷ್ಟು ಹೆಮ್ಮೆಯಾಗಿತ್ತು. ಏನೋ ತಾನು ಆಕೆಗೆ ದೊಡ್ಡ ಉಪಕಾರ ಮಾಡುವ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದ. ಆಕೆಯೂ ಅದನ್ನು ಹಾಗೇ ಸ್ವೀಕರಿಸುತ್ತಿದ್ದಳು. ಅವಳನ್ನು ಗೆದ್ದ ಬಗೆಯನ್ನು ನೆನೆಸಿಕೊಂಡು ನಿರಂಜನ ಠೀವಿಯಿಂದ ಗೆರೆಯಾಗಿ ಕತ್ತರಿಸಿದ್ದ ಮೀಸೆಯನ್ನು ಸವರಿಕೊಳ್ಳುತ್ತಿದ್ದ.

೨

ಹೀಗೇ ಒಂದೆರಡು ತಿಂಗಳು ಅವರ ವ್ಯವಹಾರ ನಡೆಯಿತು. ಅಷ್ಟರಲ್ಲಿ ಊರಿಗೊಬ್ಬ ದೊಡ್ಡ ಸಂಗೀತಗಾರರು ಬಂದರು. ಒಂದೆರಡು ಕಛೇರಿಯಾಗಿ, ಊರಲ್ಲಿ ನಾಲ್ಕು ಜನರ ಬಾಯಲ್ಲಿ ಆತನ ಹೆಸರು ಆಡುವ ಹಾಗಾದಕೂಡಲೇ, ಕಾಮಾಕ್ಷಮ್ಮನ ಮನೆಯಿಂದ ಅವನಿಗೂ ಆಹ್ವಾನ ಬಂತು. ಅವನೂ ಆಗಾಗ ಹೋಗಿ ಬರತೊಡಗಿದ; ಸಲಿಗೆಯೂ ಹೆಚ್ಚಿತು. ಮೊದಮೊದಲು ಅಸಡ್ಡೆಯಾಗಿದ್ದ ನಿರಂಜನನಿಗೂ, ದಿನಗಳೆದ ಹಾಗೆ, ಅಸೂಯೆ ಬರಲಾರಂಭಿಸಿತು. ಸ್ವಲ್ಪ ದಿನ ಕಳೆದಮೇಲೆ ಕಾಮಾಕ್ಷಮ್ಮ ಕೈ ಜಾರಿದಳೇನೋ ಎಂಬ ಅನುಮಾನ ಹುಟ್ಟಿತು. ಅನುಮಾನವಾದ ಕೂಡಲೇ ನಿರಂಜನ ತನ್ನನ್ನೂ ಸೀಕಲು ಕಡ್ಡಿಯ ಹಾಗಿದ್ದ ಸಂಗೀತಗಾರನನ್ನೂ ಹೋಲಿಸಿ ನೋಡಿಕೊಂಡ. 'ಛೆ! ಎಲ್ಲಾದರೂ ಉಂಟೆ?' ಎಂದಿತು ಕನ್ನಡಿ. ಆದರೂ ಅವನಿಗೆ ತೃಪ್ತಿಯಾಗಲಿಲ್ಲ. ಒಂದೆರಡು ಸಲ ಕಾಮಾಕ್ಷಮ್ಮನ ಇದುರಿನಲ್ಲೇ ಸಂಗೀತಗಾರನನ್ನು ಹೀಯಾಳಿಸಿ ಮಾತಾಡಿ ಮುಖ ಮುರಿದ. ಆದರೂ ಸಲಿಗೆ ಸಡಲುವ ಹಾಗೆ

ಕಾಣಲಿಲ್ಲ. ಅನುಮಾನ ಆಲೋಚನೆಗಿಟ್ಟುಕೊಂಡಿತು. ತಮ್ಮಿಬ್ಬರ ಸ್ನೇಹಕ್ಕೆ ಮೂಲವಾಗಿ ಬಂದ ಈ ಹಾವಿನ ಮರಿಯನ್ನು ಹೇಗೆ ಮುರಿಯುವುದು ಎಂದು ಯೋಚಿಸಲಾರಂಭಿಸಿದ. ಸಂಗೀತಗಾರನ ಮೇಲೆ ಸಿಟ್ಟಿತ್ತು. ಆದರೆ ಅವನಿಗಿಂತ ಹೆಚ್ಚು ಕಾಮಾಕ್ಷಮ್ಮನ ಮೇಲೆ. ತನ್ನಂಥವನ ಪ್ರಣಯ ಪ್ರಸಾದ ಪಡೆದ ಹೆಣ್ಣು, ಆ ಸೀಕಲು ಕಡ್ಡಿಯ ಪ್ರೇಮಕ್ಕೆ ಕೈ ಚಾಚುತ್ತಿದಾಳಲ್ಲಾ ಎಂತ. ಕಡೆಗೆ ಅವಳಿಗೆ ಬುದ್ಧಿ ಕಲಿಸಬೇಕು ಎಂದು ನಿಶ್ಚಯಮಾಡಿಕೊಂಡ. "ಆಕೆಗೆ ಸಂಗೀತಗಾರನ ಮಧುರಕಂಠದಿಂದಾಗಿ ಕ್ಷಣಿಕ ಮೋಹ ಹುಟ್ಟಿತು. ನಾನು ಕೈ ತಪ್ಪುವ ಭೀತಿ ಬಂದರೆ ಆ ಭ್ರಾಂತಿ ತಾನೆ ತೊಲಗುತ್ತದೆ" ಎಂದುಕೊಂಡು ಕನ್ನಡಿಯಲ್ಲಿ ಮುಖ ನೋಡಿಕೊಂಡ. ಕನ್ನಡಿ ಹಾಗೇ ಸರಿ ಎಂದಿತು. ಹಾಗೂ, ಹೀಗೂ, ಹಿಗ್ಗಾ ಮುಗ್ಗಾ ಯೋಚನೆ ಮಾಡಿ ಅದೇ ನಿರ್ಧಾರಕ್ಕೇ ಬಂದ.

ಒಂದು ದಿನ ಆಕೆಯ ಮನೆಗೆ ಹೋದಾಗ ಕಾಮಾಕ್ಷಮ್ಮ ಸಂಗೀತಗಾರನ ಹತ್ತಿರವಿದ್ದುದನ್ನು ಕಂಡು ಕೋಪದಲ್ಲಿ ಅಲ್ಲೇ ಒಂದು ಕಾಗದ ಬರೆದು ಆಕೆಯ ಕೈಗಿಟ್ಟು ಬಂದ. "ನಿನ್ನನ್ನು ನಾನು ಬಯಸಲಿಲ್ಲ. ಆದರೂ ನಿನ್ನ ದಾಹಕ್ಕಾಗಿ ಮನಕೊಟ್ಟೆ. ಆದರೆ ಈಗೀಗ ನಿನ್ನ ಸ್ವಭಾವ ಬದಲಾಯಿಸುತ್ತಿದೆ. ನೀನಿನ್ನು ಆ ಸಂಗೀತಗಾರನನ್ನು ಓಡಿಸದಿದ್ದರೆ ಇದೇ ನಮ್ಮಿಬ್ಬರ ಸ್ನೇಹಕ್ಕೆ ಕೊನೆ."

ಕಾಗದವನ್ನೋದಿಕೊಂಡು ಆಕೆಯ ಮುಖ ಬೆಳ್ಳಗಾಯಿತು. ಹುಬ್ಬು ಕೂಡಿತು. ತುಟಿ ಔಡು ಕಚ್ಚಿತು.

ಯುದ್ಧದಲ್ಲಿ ಗೆದ್ದವನ ಹಾಗೆ ನಿರಂಜನ ಎದೆ ಉಬ್ಬಿಸಿಕೊಂಡು ಬಂದ.

ಕಾಗದ ಬರೆದುಕೊಟ್ಟು ಬಂದು ಎರಡು ದಿನವಾಯಿತು, ಮೂರು ದಿನವಾಯಿತು. ಇವನು ಅವರ ಮನೆ ಕಡೆ ಸುಳಿಯಲಿಲ್ಲ; ಅವರ ಮನೆಯಿಂದಲೂ ಇವನಿಗೆ ಕರೆ ಬರಲಿಲ್ಲ. ನಿರಂಜನ, ಕಾಮಾಕ್ಷಮ್ಮ ಸೋತು ಬಂದರೆ ಆಕೆಗೆ ಹೇಗೆ ಬುದ್ಧಿ ಕಲಿಸಬೇಕೆಂದು ಸಾವಿರ ಯೋಜನೆ ಕಟ್ಟುತ್ತಿದ್ದ. ಹೋಗಬಾರದು, ಹೋದರೂ ಮಾತಾಡಿಸಬಾರದು, ಮಾತಾಡಿಸಿದರೂ ಮನಸ್ಸಿನ ಮುಳ್ಳು ಚುಚ್ಚಬೇಕು. ಹೀಗೆ ಸಾವಿರ ಯೋಚನೆ ಹೊಸ ರೂಪ ಹಾಕಿ ಅವನ ಮನಸ್ಸಿನಿಂದ 'ಹೂ' ಎನಿಸಿಕೊಳ್ಳುತ್ತಿತ್ತು.

ನಾಲ್ಕೈದು ದಿನ ಕಳೆದ ಮೇಲೆ ಒಂದು ದಿನ ಮಧ್ಯಾಹ್ನ ಅವರ ಮನೆಯ ಆಳು ಒಂದು ಕಾಗದ ತಂದುಕೊಟ್ಟು ಹೋದ. ಅವನ ಹೃದಯ ಒಮ್ಮೆ ಗೆಲುವಿನ ಹುಮ್ಮಸ್ಸಿನಿಂದ ವಿಜೃಂಭಿಸಿತು.

ಆ ಉತ್ಸಾಹದಲ್ಲೆ ಕಾಗದವನ್ನು ತೆಗೆದು ಓದಿಕೊಂಡ. ಕಾಗದದಲ್ಲಿ ಹೆಚ್ಚು ಏನೂ ಇರಲಿಲ್ಲ. ಎರಡೇ ಸಾಲಿನಲ್ಲಿ ಮುಗಿದಿತ್ತು ಆ ಕಾಗದ. ಅದಕ್ಕೂ ತುದಿ, ಬುಡ, ಯಾರಿಗೆ, ಏನು ಎನ್ನುವುದೇನೂ ಇರಲಿಲ್ಲ. ಇದ್ದುದಿಷ್ಟೇ :

'ನಿಮ್ಮ ಕಾಗದ ಓದಿಕೊಂಡೆ. ಮಧ್ಯಾಹ್ನದ ಕಡೆಗೆ, ಬಂದು ಹೋಗಿ.'

ಆ ಕಾಗದವನ್ನೋದಿ ಅವನ ಮನಸಿಗೆ ತುಂಬಾ ನಿರಾಶೆಯಾಯಿತು. ಇಷ್ಟೇನೇ ಎಂದಿತು, ಏನೇನೋ ಬಯಕೆಯನ್ನು ಬಯಸಿ ನಿರೀಕ್ಷಿಸಿದ ಅವನ ಮನಸು.

ಆದರೂ ಮರುಗಳಿಗೆ ಅದೇ ಮನಸೇ ಅವನಿಗೆ ಸಮಾಧಾನ ಹೇಳಿತು : 'ಛಿ! ನಿರುತ್ಸಾಹಪಾದವರುಂಟೆ? ಹೆಣ್ಣು ನಿರ್ಲಜ್ಜೆಯಾಗಿ, ತನ್ನೆದೆಯ ಭಾಗಗಳನ್ನೆಲ್ಲಾ ಕಾಗದದಲ್ಲಿ ಬರೆದಾಳೆ? ಹೃದಯದ ಭಾವವನ್ನು ಬರುಡು ಮಾತು ಬಣ್ಣಿಸಲಳವೇ? ಮುಖತಃ ಕಂಡು, ತನ್ನ ಪಶ್ಚಾತ್ತಾಪ ಪರಿತಾಪವನ್ನು ನಿವೇದಿಸಿಕೊಳ್ಳಲೆಂದೇ ಈ ಆಹ್ವಾನ. ನಿರಾಶನಾಗಬೇಡ' ಎಂದು ಬುದ್ಧಿ ಹೇಳಿತು.

ಸ್ವಲ್ಪ ಯೋಚಿಸಿದ ಮೇಲೆ ಅವನಿಗೂ ಅದೇ ಸರಿ ಎನಿಸಿತು. ಅವಳಿಗೆ ಪಶ್ಚಾತ್ತಾಪವಾಗದಿದ್ದರೆ ಈ ಕಾಗದ ಬರೆಯುತ್ತಿದ್ದಳೇ? ಈ ಆಹ್ವಾನ ಕಳಿಸುತ್ತಿದ್ದಳೇ .... ಆದರೂ ಈ ನಾಲ್ಕೈದು ದಿನ ತಡಮಾಡಿದಳೇಕೆ? .... ಏಕೆ? ಏನು ಕಾರಣವಿರಬಹುದು ಈ ನಿಧಾನಕ್ಕೆ? .... ಪಾಪ! ಪಶ್ಚಾತ್ತಾಪದಗ್ಧೆಯಾದ ಅವಳಿಗೆ ಏನು ಬರೆಯಬೇಕೆಂದು ಕೂಡಾ ತೋಚದೆ ಹೋಗಿರಬೇಕು .... ನಿಜ. ಹಾಗೇ ಇರಬೇಕು ಎಂದುಕೊಂಡು, ಏಕೋ ಅಕಾರಣವಾಗಿ ಸೋಲುಮುಖ ಹಾಕಿಕೊಂಡಿದ್ದ ಮನಸಿಗೆ, ಗೆಲುವು ತುಂಬಿದ.

ಮಧ್ಯಾಹ್ನವಾಗುತ್ತಾ ಬಂದಹಾಗೆ ನಿರಂಜನನ ಹೃದಯದ ವೇಗವೂ ಹೆಚ್ಚಾಗುತ್ತಾ ಬಂತು. ಊಟ ಮುಗಿಸಿ ಗಡಿಯಾರವನ್ನೇ ನೋಡುತ್ತಾ ಕುಳಿತುಬಿಟ್ಟಿದ್ದ. ಅವನ ಹೃದಯ ಅಸ್ಪಷ್ಟಭಾವದಾವೇಗದಲ್ಲಿ ವಿಹ್ವಲವಾದ ಹಾಗೆ, ಅವನ ಚಿತ್ತವೂ ಚಂಚಲವಾಗಿತ್ತು. ಕಲ್ಪನೆ ಹುಚ್ಚು ಹುಚ್ಚಾಗಿ ಓಡುತ್ತಿತ್ತು.

ಅವನ ಬಹುಮುಖ ಕಲ್ಪನಾ ವಿಲಾಸದ ಕೇಂದ್ರ ಕಾಮಾಕ್ಷಮ್ಮ.

ನಾನು ಅವರ ಮನೆಗೆ ಹೋದಾಗ, ತನ್ನನ್ನು ನೋಡಲು ಆ ಸೋತ ಹೆಣ್ಣು ಹೇಗೆ ಬರಬಹುದು, ಆಕೆ ಬೇಡುವ ಕ್ಷಮಾ ಯಾಚನೆಯ ಧಾಟಿ ಹೇಗಿರಬಹುದು, ತನ್ನನ್ನು ತಬ್ಬಿಕೊಂಡು ಎದೆಯಲ್ಲಿ ಮುಖ ಮರೆಸಿಕೊಂಡು 'ನನ್ನದು ತಪ್ಪಾಯಿತು ಕ್ಷಮಿಸಿ' ಎನ್ನುತ್ತಾಳೆ ಅಥವಾ...., ಕ್ಷಮೆ ಬೇಡುವಾಗ ಅಪರಾಧ ಭಾರಕ್ಕೆ ಆಕೆಯ ತಲೆ ಹೇಗೆ ಬಾಗಬಹುದು, ಅಪರಾಧದ ಅರಿವಿನ ಕ್ಷಮಾಯಾಚನೆಯ ಆರ್ತತೆಯಿಂದ ಕಣ್ಣು ಹೇಗೆ ಕಂಬನಿ ತುಂಬಬಹುದು .... ಹೀಗೇ ಮನಸಿನ ಕಣ್ಣೆದುರು, ಅಭಿಮಾನ ಮುರಿದು, ಕ್ಷಮೆ ಬೇಡಿ ನಿಂತ ದೀನ ಪ್ರಣಯಿನಿಯ ಕಲ್ಪನಾತೀತ ಚಿತ್ರವನ್ನು ಊಹಿಸಿಕೊಳ್ಳಲೆತ್ನಿಸುತ್ತಾ ಎದೆ ಉಬ್ಬಿಸಿದ. ಕೈಬೆರಳು ಮೀಸೆಯ ಕುಡಿಯನ್ನು ಸವರಿತು.

ಈ ಯೋಚನೆ ಬರುತ್ತಲೂ, ತಾನು ಈ ಪರಿಸ್ಥಿತಿಯಲ್ಲಿ ಹೇಗೆ ನಡೆದು ಕೊಳ್ಳಬೇಕೆಂಬುದನ್ನೂ ಯೋಚಿಸಿದ.

ಅವಳು ದೀನ ಸ್ವರದಲ್ಲಿ ಕ್ಷಮೆ ಯಾಚಿಸಿದಾಗ, 'ಕ್ಷಮಿಸಿದೇನೆ' ಎನ್ನುವುದಾದರೂ, ಮಾತು ಉಕ್ಕಿನ ಹಾಗೆ ಸೆಟೆದು ಬರಬೇಕು. ಸೋಲುವ ಸಮಯದಲ್ಲೂ ಬಿಗುಮಾನದ ಬಿಗಿ ತಪ್ಪಬಾರದು. ಅವಳ ದುರ್ಭರ ದುಃಖಕ್ಕೆ ನಿಧಾನವಾಗಿ ಎದೆ ಕರಗಿದ ಹಾಗೆ ನಟಿಸಬೇಕು.

ಹೀಗೆ ತೆರೆ ಹೊಡೆದು, ತೆರೆ ಮರಳಿ ತೂಗುತ್ತಿತ್ತು ಅವನ ಯೋಚನಾ ಲಹರಿ. ಚಿತ್ತವೀಪರಿ ಚೆಲ್ಲಾಟವಾಡುತ್ತಿರುವಾಗಲೇ, ಗೋಡೆಗೆ ನೇತುಹಾಕಿದ ಗಡಿಯಾರ ಮೂರು ಗಂಟೆ ಹೊಡೆಯಿತು.

ನಿಧಾನವಾಗಿ, ಲಕ್ಷ್ಯವಿಟ್ಟು ಉಡುಪು ಧರಿಸಿ, ಸಕಲಾಲಂಕಾರ ಮಾಡಿ ಕೊಂಡು ಹೊರಟ ನಿರಂಜನ. ಅವನ ರೀತಿ ಮೊದಲ ಬಾರಿಗೆ ಹೆಂಡತಿಯನ್ನು ನೋಡಲು ಹೋಗುವವನ ಹಾಗಿತ್ತು.

೩

ಅವರ ಮನೆ ತಲುಪಿದಾಗ ಬಾಗಿಲಲ್ಲಿ ನಿಂತಿದ್ದ ಆಳು, ಅವನಿಗೆ ಸ್ವಾಗತ ನೀಡಿ, ಡ್ರಾಯಿಂಗ್ ರೂಂನಲ್ಲಿ ಕೂಡಿಸಿದ. ಕಾಮಾಕ್ಷಮ್ಮ ತಾನೇ ಬಂದು ಸ್ವಾಗತ ನೀಡದಿದ್ದುದಕ್ಕಾಗಿ ಅವನಿಗೆ ಸ್ವಲ್ಪ ನಿರಾಶೆಯಾಯಿತು. ಅದು ಹೋಗಲಿ ಎಂದರೆ, ಅವನು ಒಳಗೆ ಬಂದು ಕುಳಿತು ಹತ್ತಾರು ನಿಮಿಷವಾದರೂ ಇನ್ನೂ ಅವನನ್ನು ನೋಡಲು ಕಾಮಾಕ್ಷಮ್ಮ ಬಂದಿರಲಿಲ್ಲ, ಅದಕ್ಕೂ ಅವನ ಮನಸು ಸಮಾಧಾನ ಹೇಳಿತು. ಬಹುಶಃ ಹೇಗೆ ಅವನ ಕಣ್ಣಿಗೆ ಬಿದ್ದರೆ, ಅವನನ್ನು ಬೇಗ ಒಲಿಸಿಕೊಳ್ಳಲು ಸಾಧ್ಯವಾದೀತು, ಕಂಡಾಗ ಹೇಗೆ ಮಾತಾಡಿಸಬೇಕು ಎಂದು ಯೋಚಿಸುತ್ತಿರಬೇಕು ಎಂತ.

ನಿರಂಜನ ಹೀಗೆ ಯೋಚಿಸುತ್ತಿರುವಾಗಲೇ ಕಾಮಾಕ್ಷಮ್ಮ ಒಳಗೆ ಬಂದಳು. ಆಕೆ ಒಳಗೆ ಬಂದಳೆಂದು, ಆಕೆ ಬರುವ ಮೊದಲೇ, ಆಕೆ ಹಾಕಿಕೊಂಡ ನವಿರಾದ ಪರಿಮಳ ಗಾಳಿಯಲ್ಲಿ ತೇಲಿಬಂದು ಹೇಳಿತು. ಕೋಣೆಯೊಳಗೆ ಬರುತ್ತಿದ್ದ ಆಕೆಯನ್ನು ನಿರಂಜನ ದಿಟ್ಟಿಸಿ ನೋಡಿದ.

ಅವನು ಮನಸಿನಲ್ಲೆ ಊಹಿಸಿಕೊಂಡಂತೆ ಇರಲಿಲ್ಲ ಆಕೆ. ಆಕೆಯ ಮುಖ ಕಂಬನಿಯ ಕರೆಗಟ್ಟಿರಲಿಲ್ಲ, ಕೂದಲು ಧೂಳಿದೂಸರಿತವಾಗಿರಲಿಲ್ಲ. ಕಣ್ಣಲ್ಲಿ ಆರ್ತತೆಯ ಕಂಬನಿ ಇರಲಿಲ್ಲ– ಆ ಲಕ್ಷಣಗಳೇ ಇರಲಿಲ್ಲ ಆಕೆಯಲ್ಲಿ. ಕಣ್ಣುಬಿಟ್ಟು ನೋಡಿದ್ದರೆ, ಕೆಣಕಿದ ಬೇಟೆಗಾರನ ಮೇಲೆ ಹಾರಿ ಬೀಳಲು ಕಾದ ಹುಲಿಯಂತಿದ್ದಳು.

ಕೋಣೆಯೊಳಗೆ ಬಂದ ಆಕೆ, ಎಂದಿನಂತೆ ನೇರವಾಗಿ ಇವನ ಪಕ್ಕದಲ್ಲಿ ಮೈಗೆ ಮೈ ಒರಗಿಸಿ ಕೂಡಲಿಲ್ಲ. ಇವನ ಇದಿರುಗಡೆಯ ಸೋಫಾದಲ್ಲಿ ಕೂತುಕೊಂಡಳು. ಇವನನ್ನು ನೋಡಿ ಕಣ್ಣೀರು ಹರಿವುದಿರಲಿ, ಪರಿಚಯದ ಕಿರುನಗೆ ಕೂಡಾ ಆಕೆಯ ತುಟಿಯಿಂದ ತುಳುಕಲಿಲ್ಲ.

ಅದೇನೂ ಅಂಥ ಮಹತ್ವದ ವಿಷಯವಲ್ಲವಾದರೂ, ನಿರಂಜನನಿಗೆ ಅದರಿಂದ ದಿಗ್ಭ್ರಾಂತಿಯಾದ ಹಾಗಾಯಿತು. ಏನು ಮಾತಾಡಬೇಕೆಂಬುದೇ ತೋಚಲಿಲ್ಲ– ಏನೇನೋ ಮಾತು ಯೋಚಿಸಿಕೊಂಡು ಬಂದಿದ್ದ ಅವನಿಗೆ. ಅವನ ಸ್ಥಿತಿ ಜೀವನದ ಮೊಟ್ಟಮೊದಲ ಸಂಗೀತ ಕಛೇರಿಗೆ ಸರ್ವ ಸಿದ್ಧತೆಗಳನ್ನೂ ಮಾಡಿಕೊಂಡು ಬರದ ಅನನುಭವಿಕ ಸಂಗೀತಗಾರನಿಗೆ, ಸಭಿಕರನ್ನು

ಕಂಡೇ ಜಂಘಾಬಲ ಉಡುಗಿಹೋದ ಹೊತ್ತಿನಲ್ಲಿ, ಪ್ರಯತ್ನ ಪಟ್ಟು ಹಾಡಲಾರಂಭಿಸಿದ ಗಳಿಗೆಯಲ್ಲೇ ಶ್ರುತಿ ಮಾಡಿಟ್ಟುಕೊಂಡ ತಂಬೂರಿ ಅಪಸ್ವರ ಪಲುಕಲಾರಂಭಿಸಿದರೆ ಹೇಗೋ ಹಾಗಿತ್ತು. ಅಕಾರಣವಾಗಿ ಮುಖ ಬೆವರಿಟ್ಟಿತು.

ಕಾಮಾಕ್ಷಮ್ಮನೇ ಮಾತು ಆರಂಭಿಸಿದಳು. 'ನೀವು ಬರುತ್ತೀರೋ ಇಲ್ಲವೋ ಎಂದಿದ್ದೆ. ಅಂತೂ ಬಂದಿರಿ.' ಅವನು ಬಯಸಿದ್ದ ಹಾಗೆ ಆಕೆಯ ಮಾತು ಮೃದುವಾಗಿರಲಿಲ್ಲ. ಉಕ್ಕಿನಂತೆ ಬಿರುಸಾಗಿತ್ತು.

'.... ನೀ .... ನೀ .... ನೀವು ಹೇಳಿ ಕೇಳಿದಮೇಲೆ ....' ದಿನದಂತೆ ಅಂದು ಅವನಿಗೆ 'ನೀನು' ಎನ್ನುವುದೂ ಆಗಲಿಲ್ಲ.

'ಸರಿಯೆ, ನಿಮ್ಮ ಕಾಗದ ಓದಿದೆ. ಅದರಮೇಲೆ ಏನೂ ಹೇಳಬಾರದೆಂತಲೇ ಮಾಡಿದ್ದೆ.....'

ಅವಳ ಮಾತು ಕೇಳಕೇಳುತ್ತಲೇ ಅವನ ಹೃದಯ ಏಕೋ ಸೋಲೊಪ್ಪಿಕೊಂಡುಬಿಟ್ಟಿತು.

'ಏನೋ ಅವಸರದಲ್ಲಿ, ಸಿಟ್ಟಿನಲ್ಲಿ ....'

'ಸರಿ. ನನಗೆ ಗೊತ್ತಾಯಿತು. ಅವಸರ, ಸಿಟ್ಟು. ಏಕೆ? ಯಾರ ಮೇಲೆ. ನಿಮ್ಮ ಗಂಡಸರ ಹಣೇಬರಹವೇ ಇಷ್ಟು. ಕೃತಜ್ಞತೆ ಇಲ್ಲದ ಪಶುಗಳು. ಯಾರಾದರೂ ಹೆಣ್ಣು ಸೋತಳೆಂದರೆ ಸರಿ, ಗುಲಾಮಳೆನ್ನುವ ಹಾಗೆ ಅಧಿಕಾರ ಮಾಡಬಯಸುತ್ತೀರಿ. ನನ್ನನ್ನು ನೀವು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ಮಾಡಿಕೊಂಡಿದ್ದರೆ ಈ ಅಪಚಾರ ನಿಮ್ಮಿಂದ ಆಗುತ್ತಿರಲಿಲ್ಲ. ನಿಮ್ಮ ಸುಖಕ್ಕೆ ನಾನು ಬೇಕಾದ ಹಾಗೆ, ನನ್ನ ಸುಖಕ್ಕೆ ನನಗೆ, ನೀವು ಬೇಕಾಯಿತು. ಇದರಲ್ಲಿ ಯಾರಿಗೆ ಯಾರೂ ಋಣಿಗಳಲ್ಲ; ಯಾರ ಮೇಲೆ ಯಾರೂ ಅಧಿಕಾರ ಮಾಡಬೇಕಾದದ್ದಿಲ್ಲ. ಆ ಠೇಂಕಾರ, ಮದ ಮರೆತಿದ್ದರೆ, ಇನ್ನೂ ನಾಲ್ಕೊಪ್ಪತ್ತು ಸುಖವಾಗಿರಬಹುದಾಗಿತ್ತು. ಇಲ್ಲದ ಮದ ಮೆರೆಸಲು ಹೋಗಿ ಅದನ್ನು ಕಳೆದುಕೊಂಡಿರಿ. ನನಗೆ ಆ ಕಾಗದ ಬರೆಯಲು ನಿಮಗೆ ನಾಚಿಕೆಯಾಗಬೇಕಿತ್ತು. ಅಹಂಕಾರಕ್ಕೆ ಉದಾಸೀನವೇ ಮದ್ದೆಂದು ಸುಮ್ಮನಿರಬಹುದಾಗಿತ್ತು. ಆದರೂ ನಾನು ಸುಮ್ಮನಾದುದನ್ನು ಅಪಾರ್ಥ ಮಾಡಿಕೊಂಡೀರೆಂದು, ಈ ಮಾತು ಹೇಳಲು ಕರೆಕಳಿಸ

ಬೇಕಾಯಿತು. ಅಷ್ಟೆ. ನಿಮ್ಮಿಂದ ಇನ್ನು ನನಗೇನೂ ಆಗಬೇಕಾದುದಿಲ್ಲ. ನೀವಿನ್ನು ಹೊರಡಬಹುದು. ನಮಸ್ಕಾರ.'

ಎಂದು ಮಾತಿನ ಸಾಲುಗುಂಡು ಸಿಡಿಸಿ, ಅವನ ಪ್ರತ್ಯುತ್ತರಕ್ಕೂ ಕಾಯದೆ, ಕಾಮಾಕ್ಷಮ್ಮ ಹೊರಟುಹೋದಳು.

ಇದ್ದಕ್ಕಿದ್ದ ಹಾಗೇ ಸುರಿದ ಆಲಿಕಲ್ಲಿನ ಮಳೆಯಲ್ಲಿ ಸಿಕ್ಕ ನಿರ್ಭಾಗ್ಯನಂತಿದ್ದ ನಿರಂಜನ. ಸುತ್ತಿಸಿ ಸುತ್ತಿಸಿ ಕಪಾಳಕ್ಕೆ ಹೊಡೆದಹಾಗಿತ್ತು. ಅವನ ಮುಖದಲ್ಲಿದ್ದ ಗೆಲುವಿನ ನಿರೀಕ್ಷೆ ಮುರಿದು ಮುಖ ಮಸಣವಾಗಿತ್ತು. ಇದ್ದಕ್ಕಿದ್ದಹಾಗೆ ಕೋಣೆಯಲ್ಲಿ ಕವಿದ ಮೌನ 'ಇನ್ನು ನಿನಗಿಲ್ಲಿ ಎಡೆಯಿಲ್ಲ, ಹೊರಡು' ಎಂದಿತು. ಕೋಣೆಯಲ್ಲಿದ್ದ ಕಲಾವಸ್ತುಗಳು ಅಣಕಿಸಿ ಕಣ್ಣು ಹೊಡೆದವು.

ಮುಖದಿಂದಿಳಿಯುತ್ತಿದ್ದ ಬೆವರು ಒರೆಸಿಕೊಳ್ಳುತ್ತಾ ಹೊರಹೊರಟ ನಿರಂಜನ.

ಗೆಲ್ಲಲು ಬಂದ ಗೆಣೆಯ, ಸೋತು ಹೊರಟ!



# ಮೂರು-ನಗು

೧

ಅಂದು ನೋಡಿ ಬಂದ ಸಿನಿಮಾ ಅವನ ಹೃದಯದಮೇಲೆ ವಿಚಿತ್ರ ಪರಿಣಾಮವನ್ನುಂಟುಮಾಡಿತ್ತು.

ಅವನದು ಪ್ರಶಾಂತ ಜೀವನ. ಅವನ ಬಾಳಿನ ಕಡಲಿನಲ್ಲೆಂದೂ ಉಬ್ಬರವಿಳಿತವಾಗಿರಲಿಲ್ಲ, ಬಿರುಗಾಳಿ ಬೀಸಿರಲಿಲ್ಲ, ಬಡಬಾನಲ ಕಡೆದಿರಲಿಲ್ಲ.

ಶ್ರೀಮಂತರಾದ ತಂದೆತಾಯಿಗಳ ಮುದ್ದಿನ ಮಗನಾಗಿ ಬೆಳೆದಿದ್ದ. ಜೀವನವನ್ನು ಸವಿಮಾಡಿಕೊಂಡು ಅನುಭವಿಸಲು ಸಾಕಷ್ಟು ವಿದ್ಯಾಭ್ಯಾಸವಾಗಿತ್ತು. ಮಿಾಸೆಯ ಕುಡಿ ಚಿಗುರೊಡೆಯುವ ವೇಳೆಗೆ, ಮಡದಿ ಮನೆಗೆ ಬಂದಿದ್ದಳು. ಅವನು ಮದುವೆಗೆ ಮುನ್ನ ಅವಳನ್ನು ಪ್ರೀತಿಸಿ, ವಿರಹದಾರಿಯಲ್ಲಿ ಬೆಂದು, ಕಡೆಗೆ ಕೈ ಹಿಡಿದಿರಲಿಲ್ಲ. ತಂದೆ ತಾಯಿ ತಾವೇ ಆರಿಸಿ ತಂದವಳು ಸರಸಾ. ಮೃದು ಸ್ವಭಾವದ ಚೆಲುವೆ. ಅವಳೇ ಅವನಿಗೂ ಪ್ರಿಯವಾಗಿದ್ದಳು. ಹೆಣ್ಣು ನೀಡಬಹುದಾದ ಸಕಲ ತೃಪ್ತಿಗಳನ್ನೂ ನೀಡಿದ್ದಳು. ಅವಳು ಕೊಡಬಹುದಾದುದಕ್ಕಿಂತ, ಹೆಚ್ಚಿನ ಸುಖವನ್ನು ಮತ್ತಾರಾದರೂ ಕೊಡಬಹುದೆಂದು, ಅವನಿಗೆ ಎಂದೂ ಅನಿಸಿರಲಿಲ್ಲ. ಹಾಗೇ ಒಬ್ಬರನ್ನೊಬ್ಬರು ಮೆಚ್ಚಿಕೊಂಡು, ಒಬ್ಬರ ಬಯಕೆಯ ತೃಪ್ತಿಯನ್ನು ಮತ್ತೊಬ್ಬರಲ್ಲಿ ಕಂಡುಕೊಂಡು ಹತ್ತುವರ್ಷ ಕಾಲ ಸಂಸಾರ ಮಾಡಿದ್ದರು.

ಆ ಹತ್ತು ವರ್ಷದಲ್ಲಿ ಅವರಿಗೆ ಯಾವ ಚಿಂತೆಯೂ ಒದಗಿರಲಿಲ್ಲ. ತಮ್ಮ ಮೊಮ್ಮಕ್ಕಳನ್ನು ನೋಡದ ಚಿಂತೆ, ಮುದುಕರಿಬ್ಬರಿಗಿತ್ತೇ ಆಗಲಿ, ಇವರಿಗೆ ಆ ಚಿಂತೆಯೂ ಇರಲಿಲ್ಲ. ಯೌವ್ವನದ ಒಗರು, ಸಂಸಾರದ ಕಾವಿನಲ್ಲಿ ಮಾಗಿ ಸವಿಯಾಗಿರಲಿಲ್ಲ; ಹುರುಪು ಬಾಡಿರಲಿಲ್ಲ.

ಇಬ್ಬರೂ ಇನ್ನೂ ತುಂಬು ಉತ್ಸಾಹದಿಂದ, ಜೀವನ ಮಾಡುತ್ತಿದ್ದರು–ನವದಂಪತಿಗಳಂತೆ.

ಆದರೂ ಅವತ್ತು ನೋಡಿದ ಸಿನಿಮಾ, ಅವನಲ್ಲಿ ಯಾವುದೋ ಅದುವರೆಗೂ ಸುಪ್ತವಾಗಿದ್ದ ಹಸಿವನ್ನು ಕೆರಳಿಸಿತ್ತು.

ಸಿನಿಮಾ ನೋಡಿ ಬಂದಮೇಲೆ ಊಟ ಮುಗಿಸಿ ಮಲಗುವ ಕೋಣೆಗೆ ಬಂದು, ಮೃದುವಾದ ಹಾಸಿಗೆಯ ಮೇಲೆ ಮಲಗಿಕೊಂಡ. ಹಾಲು ಬಣ್ಣದ, ಮೃದುವಾದ ಬೆಳಕಿನ ದೀಪ, ಆಳೆತ್ತರದ ನಿಲುವುಗನ್ನಡಿಯಲ್ಲಿ ಪ್ರತಿಫಲಿಸಿ, ಕೋಣೆಯಲ್ಲಿ ಏನೋ ಒಂದು ಹೊಸಬಗೆಯ ಬೆಳಕನ್ನು ಹರಡಿತ್ತು.

ಅರ್ಥವಾಗದೊಂದು, ನೂತನ ಉತ್ತೇಜಕ ಭಾವತರಂಗ, ಅವನ ಎದೆಯಲ್ಲಿ ತೆರೆತೆರೆ ತೂಗುತ್ತಿತ್ತು. ಚಲಚ್ಚಿತ್ರದಲ್ಲಿ ನೋಡಿ ಬಂದ ಪಾಶ್ಚಾತ್ಯ ಚೆಲುವೆಯ ಅರೆಬೆತ್ತಲೆ ಮೈ, ಕಾಮದ ಕನಸನ್ನು ಕೆಣಕುವ ಅಂಗಾಂಗ ಸೌಷ್ಠವ, ಅವಳ ಪ್ರಣಯ ಪಿಪಾಸುವಾದ ಮಿಂಚುನೋಟ, ಕನಸಿನ ಮುಗಿಲಿನಲ್ಲಿ ಇಂದ್ರಧನುವಿನಂತೆ ಮೂಡಿ, ಬಹುದಿನದಿಂದ ಯಾವುದೋ ಮೋಡಿಗೊಳಗಾಗಿ ಮಲಗಿದ, ಯಾವುದೋ ಒಂದು ಹಸಿವನ್ನು ಕೆಣಕಿ ಎಚ್ಚರಿಸಿತ್ತು.

ಅಂದಿನವರೆಗೆ ಅವನು ಅಂಥ ಚಿತ್ರ ನೂರಾರು ನೋಡಿದ್ದ. ಆದರೆ ಇಂದಿನಂತೆ ಎಂದೂ ಅವನಿಗಾಗಿರಲಿಲ್ಲ. ಹೀಗೇಕಾಗಬೇಕು, ಇದೇನು ಮಧುರ ವ್ಯಥೆ ಎದೆಯಲ್ಲಿ ಎಂದು ಅದನ್ನೇ ಯೋಚಿಸುತ್ತ ಮಲಗಿಕೊಂಡ.

ಮುಚ್ಚಿದ ಬಾಗಿಲನ್ನು ಮೃದುವಾಗಿ ತೆರೆದ ಸದ್ದಾಯಿತು. ಹಾಗೇ ತಲೆ ತಿರುಗಿಸಿ ನೋಡಿದ. ತಾಂಬೂಲದ ತಟ್ಟೆ ಹಿಡಿದು, ಸರಸಾ ನಿರಿ ಚಿಮ್ಮಿಸಿ ಹೊಸಲು ದಾಟಿ ಬರುತ್ತಿದ್ದಳು. ಅವಳ ಬೆನ್ನ ಹಿಂದೆ ತೆಳ್ಳನೆಯ

ಬಾಗಿಲ ತೆರೆ. ಹಾಗೇ ಅವಳನ್ನು ದಿಟ್ಟಿಸಿ ನೋಡಿದ. ಅತೃಪ್ತಿಯ ನಿಟ್ಟುಸಿರು ತಾನೇ ಹೊರಬಿತ್ತು ಅವನ ಹೃದಯದಿಂದ.

ಮೆಲ್ಲಗೆ ನಡೆದು ಬಂದು ಸರಸಾ ಮಂಚದಮೇಲೆ ಮಲಗಿದ್ದ ಅವನ ಪಕ್ಕದಲ್ಲಿ ಕುಳಿತು, ಸದ್ದು ಮಾಡದೆ ವೀಳೆಯದೆಲೆಗೆ ಸುಣ್ಣ ಹಚ್ಚಲಾರಂಭಿಸಿದಳು. ಅವನು ಸ್ವಲ್ಪಹೊತ್ತು ಅವಳನ್ನು ಮಾತಾಡಿಸದೆ ಹಾಗೇ ಮಲಗಿದ್ದ. ಯಾವುದೋ ಭಾವನೆ ಯಾವುದೋ ಶೋಧನೆ. ಅವನ ಮನಸನ್ನು ಪ್ರೇರೇಪಿಸುತ್ತಿತ್ತು.

ನಾಲ್ಕುಗಳಿಗೆ ಹಾಗೇ ಮಲಗಿದ್ದು, ಎದ್ದು ನಿಂತು, ಅವಳ ಮುಖವನ್ನು ಎರಡೂ ಕೈಯ್ಯಲ್ಲಿ ಹಿಡಿದು, ಅವಳ ಮುಖದ ಮೇಲೆ ಸರಿಯಾಗಿ ದೀಪದ ಬೆಳಕು ಬೀಳುವ ಹಾಗೆ ಎತ್ತಿ ಹಿಡಿದು ನೋಡಿದ. ಅವಳಿಗೆ ಅವನ ವಿಚಿತ್ರ ಚರ್ಯೆಯನ್ನು ಕಂಡು, ಅಕಾರಣವಾಗೇ ನಗು ತುಟಿಯಮೇಲೆ ತುಳುಕಿ ಬಂತು. ಪ್ರಶ್ನೆ ಕೇಳಲೆಂದು, ತುಟಿ ತೆರೆದಳು.

'ಶ್. ಮಾತಾಡಬೇಡ.' ಎಂದು ಹೇಳಿ, ಅವಳ ಮುಖವನ್ನೇ ಪರೀಕ್ಷಿಸುವಂತೆ ಹುಡುಕುಗಣ್ಣಿನಿಂದ ನೋಡತೊಡಗಿದ.

ಮೃದುವಾದ ನುಣುಪಾದ ಹಣೆಯಮೇಲೆ ಕಂಡೂಕಾಣದಹಾಗೆ ತೆಳುವಾದ ಗೆರೆ ಕಾಣಿಸುತ್ತಿದೆ. ಕಣ್ಣಕೆಳಗೆ ಕಾಡಿಗೆಯ ಗೆರೆ ಎಳೆದಂತೆ ಒಂದು ಅಸ್ಪಷ್ಟರೇಖೆ. ಕೆನ್ನೆಯನ್ನು ಮೃದುವಾಗಿ ಹಿಂಡಿದ. ಬಿಗಿಯಾಗಿದ್ದ ಕೆನ್ನೆ ಹೌದೋ, ಅಲ್ಲವೋ ಎಂಬಷ್ಟು ಸಡಿಲವಾಗಿದೆ. ತುಟಿಯೂ ಅಷ್ಟೆ ಕೊಂಚ ಬಾತಿದೆ.

ಫ್ ! ಎಂದು ನಿಟ್ಟುಸಿರು ಬಿಟ್ಟು, ಭುಜ ಕುಣಿಸಿ, ಹಾಗೇ ಮಲಗಿಕೊಂಡ.

ಸರಸಾ ಅದುವರೆಗೂ ಒಂದೂ ಮಾತಾಡದೆ ಸುಮ್ಮನಿದ್ದಳು. ಅವನ ಚರ್ಯೆ ವಿಚಿತ್ರವಾಗಿತ್ತು. ಅವನು ತನ್ನ ಮುಖ ನೋಡುತ್ತಿದ್ದ ಹಾಗೇ, ಅವಳೂ ಅವನ ಕಣ್ಣನ್ನು ದಿಟ್ಟಿಸಿ ನೋಡಿದಳು. ಅವನ ಕಣ್ಣಿನ ಆಳದಲ್ಲಿ ಅದುವರೆಗೂ ಅವಳು ಕಾಣದ ಯಾವುದೋ ಒಂದು ಹೊಸ ಬೆಳಕು ಹೊಳೆಯುತ್ತಿತ್ತು. ಅವಳಿಗೆ ಅವನ ನೋಟ ಅರ್ಥವಾಗಿಯೂ, ಅರ್ಥವಾಗದ ಹಾಗಾದರೂ, ನಗೆಮಲ್ಲಿಗೆ ಮಾತ್ರ ತುಟಿಯಮೇಲೆ ಅರಳಿತು.

ಅವನ ಪರೀಕ್ಷೆ ಮುಗಿದಮೇಲೆ, ನಗೆಯಲ್ಲಿ ಕೊಯ್ದು ಬಂದ ಮೃದುವಾದ ಧ್ವನಿಯಲ್ಲಿ ಕೇಳಿದಳು. !

' ಮುಗಿಯಿತೆ ನಿಮ್ಮ ಪರೀಕ್ಷೆ? '

' ಹೂ. ಮುಗಿಯಿತು.'

' ಏನು ಅಷ್ಟು ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡುತಾ ಇದ್ದೀರಿ ? '

' ನಿನ್ನ ಮುಖಾನ.'

' ನನ್ನ ಮುಖ ಎನ್ನುವುದೇನೋ ಗೊತ್ತಾಯಿತು. ಆದರೆ ಹಾಗೆ ನೋಡಿದ್ದು ಏಕೆ ಎಂತ ಅರ್ಥವಾಗಲಿಲ್ಲ. ಅದಕ್ಕೆ ಕೇಳಿದೆ ? '

' ಏಕೆ ? ನೋಡಬಾರದಾಗಿತ್ತೇನು ? '

' ಛಿ! ನಿಮಗೆಲ್ಲಾದರೂ ನೋಡಬಾರದು ಎನ್ನುತ್ತಾರೆಯೇ. ಆದರೂ ಎಂದೂ ಇಲ್ಲದ ಪರೀಕ್ಷೆ ಇವತ್ತೇಕೋ ಎಂತ. ಹೋಗಲಿ. ಏನಾದರೂ ಹೊಸದು ಕಾಣಿಸಿತೆ ? '

' ಹೂ. ಕಾಣಿಸಿತು.'

' ಆ ? ' ಚಕಿತಳಾಗಿ ಕೇಳಿದಳು – ' ಏನು ? '

' ಮುದುಕಿ ಆಗುತಾ ಇದೀಯ ನೀನು.'

' ಓ ! ಅಷ್ಟೇನೇ.' ಅವನ ಉತ್ತರ ಕೇಳಿ, ನಗೆ ಕುಲುಕಿ ಬಂತು. ಹಾಗೇ ಅವನ ಕೆನ್ನೆಯನ್ನು ಹಿಂಡಿ 'ಅಲ್ಲಾ, ಇವತ್ತು ಗೊತ್ತಾಯಿತೆ ? ' ಎಂದಳು.

' ಅಂದರೆ ? '

' ದಿನದಿನಕ್ಕೆ ವಯಸ್ಸು ಹೆಚ್ಚಾಗದೆ, ಕಡಮೆಯಾಗುತ್ತದೆಯೇ ? '

' ಇಲ್ಲ. ಆದರೂ .... ' ಅವಳ ಪ್ರಶ್ನೆಗೆ ಏನೂ ಉತ್ತರ ಹೇಳಲಾಗದೆ, ಅವನು ಮಾತನ್ನು ಅರ್ಧಕ್ಕೆ ನಿಲ್ಲಿಸಿ, ಅವಳ ತೊಡೆಯಲ್ಲಿ ಮುಖ ಮರೆಸಿಕೊಂಡ.

ಅವಳು ಅವನ ತಲೆಗೂದಲಿನಲ್ಲಿ ಮೃದುವಾಗಿ ಬೆರಳಾಡಿಸುತ್ತ ಕೇಳಿದಳು – ' ಏನು ಆದರೂ .... '

' ಏನೂ ಇಲ್ಲ.'

' ಇಲ್ಲ ಎಂತ ರಾಗ ಎಳೆದರಾಯಿತೇ ? '

' ಮತ್ತೇನು ಮಾಡಬೇಕಾಗಿತ್ತು ? '

'ಏನು ಮಾಡಬೇಕೋ ? ಕೇಳಿದ ಪ್ರಶ್ನೆಗೆ ಉತ್ತರ ಕೊಡಬೇಕು.

'ಏನೋ ನನಗೇ ಗೊತ್ತಿಲ್ಲ.'

'ಹೂ. ಹಾಗೇ.'

'ಏನು ? ಹಾಗೇ .... '

'ಹೇಳಲು ಮನಸ್ಸಿಲ್ಲದಾಗ 'ಹಾಗೇ' ಎಂದೆ'

'ಅದು ನಿನಗೆ ಹೇಗೆ ಗೊತ್ತಾಯಿತು ?'

'ಯಾವುದು ?'

'ಹೇಳಲು ಮನಸಿಲ್ಲವೆಂಬುದು ?'

'ಸುಮ್ಮಸುಮ್ಮನೆ, ಏನೂ ಕಾರಣವಿಲ್ಲದೆಯೇ, ಯಾರಾದರೂ ಹತ್ತು ವರ್ಷ ಜೊತೆಗೆ ಸಂಸಾರ ಮಾಡಿದವಳ ಮುಖವನ್ನು ಹಾಗೆ ಬೆಳಕಿಗೆ ಹಿಡಿದು ನೋಡುತ್ತಾರೆಯೇ ?'

'ನೋಡಬಾರದೇಕೆ ?'

'ನೋಡಬಾರದೆಂತ ಏನೂ ಇಲ್ಲ. ಆವರೂ ನೋಡುವುದಿಲ್ಲ.

'ಅದಕ್ಕೇ ....'

'ಅದಕ್ಕೇ .... ಕಾರಣ ಕೇಳಿದ್ದು'

'ಸಿಟ್ಟುಮಾಡಿಕೊಳ್ಳುವುದಿಲ್ಲ ತಾನೇ ?'

'ಯಾರಮೇಲೆ ?'

'ನನ್ನಮೇಲೆ.'

'ಬ್ಬಾ ? ನನ್ನ ಸಿಟ್ಟಿಗೆ ತುಂಬಾ ಹೆದರುವರ ಹಾಗೆ. ಇರಲಿ ಹೇಳೀಂದರೆ.'

'ಸಿನೀಮಾದಲ್ಲಿ ನೋಡಿದ ಹುಡುಗಿಯ ಮುಖ ನೋಡಿ, ನಿನ್ನ ಮುಖ ನೋಡಬೇಕೆನ್ನಿಸಿತು. ಅವಕ್ಕೇ ಹೋಲಿಸಿ ನೋಡಿದೆ.'

'ಏನಾದರೂ ಕಂಡಿತೆ.'

'ಹೂ.'

'ಏನು ?'

'ಅವಳು ಯೌವ್ವನದ ಮೆಟ್ಟಿಲೇರುತ್ತಿದ್ದಳು, ನೀನು ಇಳಿಯುತ್ತಿದ್ದಿ.'

'ಅಷ್ಟೇನೇ ?'

ಇದ್ದಕ್ಕಿದ್ದ ಹಾಗೇ ಅವಳಿಗೆ ಅದುವರೆಗೂ ಅರ್ಥವಾಗದ ಯಾವುದೋ ಸಮಸ್ಯೆ ಇತ್ಯರ್ಥವಾಗಿ ನಗೆ ಉಕ್ಕಿ ಬಂತು. ನಗು ತಡೆಯಲಾರದೆ ಹಾಗೇ ಎದ್ದು ಹೋಗಿ, ಕಿಟಕಿಯ ಹತ್ತಿರ ನಿಂತುಕೊಂಡಳು. ಕಿಟಕಿಯ ಬಾಗಿಲು ಮುಚ್ಚಿತ್ತು. ಅದನ್ನು ತೆರೆದಳು. ಕಿಟಕಿಗೆ ನೇರವಾಗಿ ಇದುರಿಗಿದ್ದ ಬೀದಿಯ ದೀಪದ ಪ್ರಕಾಶಮಾನವಾದ ಬೆಳಕು, ಕಣ್ಣು ಕುಕ್ಕುವಂತೆ ಒಳಗೆ ಬಂತು.

ಕೋಣೆಯೊಳಗಿನ ಮೃದುವಾದ ಬೆಳಕಿಗೆ ಒಗ್ಗಿದ ಅವನ ಕಣ್ಣು ಆ ಬೆಳಕನ್ನು ತಾಳಲಾರದಾಯಿತು.

'ಥೂ. ಕಿಟಕಿ ಮುಚ್ಚಿಬಿಡು ಸರಸು. ಅಸಹ್ಯವಾದ ಬೆಳಕು ಅದು' ಎಂದ.

ಕಿಟಕಿಯ ಬಾಗಿಲನ್ನು ಮುಚ್ಚಿ ಮಂಚದ ಬಳಿಗೆ ಬಂದಳು. ಅವಳ ಮುಖವನ್ನು ದಿಟ್ಟಿಸಿ ನೋಡಿದ. ನಗೆ ಎವೆ ಹಿಡಿಯಲಾರದಂತೆ, ಅವಳ ತುಟಿಯಮೇಲೆ ತುಳುಕುತ್ತಿತ್ತು. ಅವಳ ನಗೆಯ ಕಾರಣ ಅವನಿಗೆ ಅರ್ಥವಾಗಲಿಲ್ಲ.

ಹತ್ತಿರ ಬಂದು ವೀಳೆಯದೆಲೆ ಅವನಿಗೆ ಮಡಿಸಿಕೊಡುವಾಗಲೂ ನಗುತ್ತಿದ್ದಳು.

ವೀಳೆಯದೆಲೆ ಮೆಲ್ಲುತ್ತಾ ಕೇಳಿದ. 'ಏಕೆ ನಗುತ್ತಿದೀಯ?' ಅವನು ಪ್ರಶ್ನೆ ಕೇಳಿದ ಕೂಡಲೇ, ಅವಳು ಹೃದಯದಲ್ಲಿ ತಡೆ ಹಿಡಿದಿದ್ದ ನಗುವಿನ ಬಂಧನ ಬಿಡಿಸಿದಂತಾಗಿ, ಗಟ್ಟಿಯಾಗಿ ನಗಲಾರಂಭಿಸಿದಳು.

ಅವನು ಅವಳ ಮುಖವನ್ನೇ ದಿಟ್ಟಿಸಿ ನೋಡಿದ. ದಿಗ್ಭ್ರಾಂತಿ ಅವನ ಕಣ್ಣುಗಳಲ್ಲಿ ತೇಲುತ್ತಿತ್ತು. ನಗುನಗುತ್ತಲೇ ಅವಳೂ ಅವನ ದಿಗ್ಭ್ರಾಂತಿಗೊಂಡ ಮುಖವನ್ನು ನೋಡಿದಳು. ಯಾವುದೋ ಭಾವ ಅವಳ ಎದೆಯಲ್ಲಿ ತುಂಬಿ ಬಂತು. ನಗುತ್ತಲೇ ಅವನನ್ನು ತಬ್ಬಿಕೊಂಡಳು. ಒಂದು ಗಳಿಗೆ ಹಾಗೇ ಇದ್ದು, ಎದ್ದು ದೀಪ ಆರಿಸಿ, ಬಂದು ಅವನ ಪಕ್ಕದಲ್ಲಿ ಮಲಗಿಕೊಂಡಳು.

'ಏಕೇ ಇಷ್ಟು ನಗು?'

ಅವಳೇನೂ ಉತ್ತರ ಕೊಡಲಿಲ್ಲ. ಅವನೆದೆಯೊಳಗೆ ಮುಖ ಮರೆಸಿದ್ದ ಅವಳು ನಗುತ್ತಿರುವುದು ಅವನಿಗೆ ಗೊತ್ತಾಗುತ್ತಿತ್ತು. ಆದರೆ ಕಾರಣ ?

'ಹುಚ್ಚೇನಾದರೂ ಹಿಡಿಯಿತೇನೇ ? '

'ಹೂ. ಯಾರಿಗೋ ಹಿಡಿಯುತಾ ಇದೆ' ಎಂದಳು ಅವನನ್ನು ತಬ್ಬಿಕೊಂಡು ನಗುತ್ತಾ.

ಅವನಿಗೆ ಏನೂ ಅರ್ಥವಾಗಲಿಲ್ಲ.

## ೨

" ನಾನು ಹೇಗೆ ಹೀಗಾದೆ ?

ಸರಸಳ ತೋಳಿನಿಂದ ಜಾರಿ, ಕ್ಯಾಥರೀನಳ ತೋಳಿಗೆ ಹೇಗೆ ಬಂದೆ ? ಇದು ಹೇಗಾಯಿತು ? ಎಂದಿನಿಂದ ?

ಹೂ. ಚೆನ್ನಾಗಿ ಜ್ಞಾಪಕವಿದೆ. ಎಷ್ಟು ಮರೆಯಬೇಕೆನಿಸಿದರೂ, ಆ ರಾತ್ರಿಯನ್ನು ಮರೆಯುವುದೇ ಆಗುತ್ತಿಲ್ಲ. ಆ ರಾತ್ರಿ .... ಸರಸಾ ಹುಚ್ಚುಹುಚ್ಚಾಗಿ ನಕ್ಕು ' ಯಾರಿಗೋ ಹುಚ್ಚು ಹಿಡಿಯುತ್ತಿದೆ ' ಎಂದ ರಾತ್ರಿ ಸ್ಪಷ್ಟವಾಗಿ ನೆನಪಿದೆ.

ಆ ರಾತ್ರಿ .... ಚಲಚ್ಚಿತ್ರ ನೋಡಿ ಬಂದು, ನನಗೆ ಸರಸಾ ಮುದುಕಿಯಾಗುತ್ತಿದಾಳೆ ಎನಿಸಿದ ರಾತ್ರಿ .... ನಿಜ. ಆ ರಾತ್ರಿಯಿಂದಲೇ ನನ್ನಲ್ಲಿ ಯಾವುದೋ ಒಂದು ಅತೃಪ್ತಿ ಬೆಳೆಯಲಾರಂಭಿಸಿತು. ಅಂದಿನಿಂದ ನಾನು ಸರಸಳಲ್ಲಿ ತೃಪ್ತಿ ಕಾಣದಾದೆ. ತೃಪ್ತಿಗಾಣದ ಹಸಿವು, ದಿನದಿನಕ್ಕೆ ಬೆಳೆಯುತ್ತ ಏನೋ ಬೇಕು, ಇನ್ನೇನೋ ಬೇಕು ಎಂದು ಕಾತರಿಸಲಾರಂಭಿಸಿತು ; ನಾನೂ ಗುರಿಗಾಣದ ಬಯಕೆಯುರಿಯಲ್ಲಿ ಕಾತರನಾಗತೊಡಗಿದೆ. ಬೇಕು, ಬೇಕು ಎಂದು ಗೋಳುಹುಯ್ದುಕೊಳ್ಳಲಾರಂಭಿಸಿತು ನನ್ನಲ್ಲಿ ಹೊಸದಾಗಿ ತಲೆ ಎತ್ತಿದ ಹಸಿವು.

ಸರಸಾ – ಕ್ಯಾಥರೀನ್ !

ಕ್ಯಾಥರೀನಳನ್ನು ಕಂಡದ್ದು ಆ ದಿನ ಪಾರ್ಕಿನಲ್ಲಿ. ಅವತ್ತು ಬಯಕೆಯ ಉರಿ ಮಿತಿಮೀರಿ ನನ್ನನ್ನು ವಿಹ್ವಲಗೊಳಿಸಿತ್ತು. ಅಂದು ಸರಸಳ ಜೊತೆಯಲ್ಲಿರಲಾರದೆ, ಒಂಟಿಯಾಗಿ ಪಾರ್ಕಿಗೆ ಬಂದಿದ್ದೆ. ಸಂಜೆ ಕ್ಯಾಥರೀನಳನ್ನು

ಕಂಡೆ. ಅವಳೂ ಬ್ಯಾಂಡು ಕೇಳುತ್ತಾ ಕೂತಿದ್ದಳು ಹುಲ್ಲಿನ ಮೇಲೆ. ಅವಳನ್ನು ನೋಡಿದ ನನ್ನ ಕಣ್ಣಿಗೆ ಮೋಡಿ ಮಾಡಿದಂತಾಯಿತು. ಸಂಜೆಯ ಗಾಳಿಯಲ್ಲಿ, ಅವಳು ಹಾಕಿದ ನವಿರಾದ ಪರಿಮಳ ತೇಲಿ ಬರುತ್ತಿತ್ತು. ನಸು ಕಂದುಬಣ್ಣದ ಕೂವಲು ಗಾಳಿಯಲ್ಲಿ ಕುಣಿಯುತ್ತಿತ್ತು. ಉಟ್ಟ ರೇಶಿಮೆಯ ಲಂಗದೊಳಗಡಗಿದ ಮೈ ಕಾಣುತ್ತಿತ್ತು. ಕಂಡು ಕಾಣದ ಮೈ, ಅವಳ ಗುಲಾಬಿ ತುಟಿ, ವಜ್ರ ಕಾಂಚನ ವರ್ಣ, ಕೆನ್ನೆಯ ಮೇಲಿನ ಕೆಂಪು, ನನ್ನನ್ನು ಬಯಕೆಯ ಚಕ್ರದಲ್ಲಿ ವೇಗವಾಗಿ ಸುತ್ತಿಸುತ್ತಿತ್ತು. ಚಲಚ್ಚಿತ್ರದಲ್ಲಿ ನೋಡಿದ ತಾರೆ, ಮನಸಿನ ಕಣ್ಣಿದಿರು ಕು ಯುತ್ತಿದ್ದಳು ಅವಳನ್ನು ಕಂಡು. ಅವಳಲ್ಲೆ ಕಣ್ಣು ನಾಟಿಹೋದವನಹಾಗೆ ನೋಡುತ್ತಿದ್ದೆ.

ಏಕೋ ಅವಳು ನನ್ನ ಕಡೆ ತಿರುಗಿದಳು. ಕಣ್ಣೆರಡೂ ಕಲೆಯಿತು. ಅವಳ ತುಟಿಯಮೇಲೆ ಮುಗುಳುನಗೆ ತೇಲಿಬಂತು, ಹುಣ್ಣಿಮೆಯ ಮುಗಿಲೊಳಗೆ ಚಂದ್ರಮೋಡದಂಚಿನಿಂದ ತೇಲಿಬಂದಹಾಗೆ.

ಅವಳ ದೃಷ್ಟಿ, ನನ್ನ ದೃಷ್ಟಿಗೆ ತಾಗಿದ ಕೂಡಲೇ, ಮೈಯೊಳಗೆ ಉರಿಹೊತ್ತಿಸಿದಂತಾಗಿ ನಿಟ್ಟುಸಿರುಬಿಟ್ಟೆ.

ನನ್ನ ನಿಟ್ಟುಸಿರು ತಗುಲಿ, ಅವಳೂ ನಿಟ್ಟುಸಿರು ಬಿಟ್ಟಹಾಗೇ. ಅವಳು ಹಾಗೆ ನನ್ನನ್ನೊಂದು ಗಳಿಗೆ ನೋಡಿ, ಮುಖ ಬೇರೆ ಕಡೆ ತಿರುಗಿಸಿಕೊಂಡಳು. ಎದ್ದುಹೋಗಲಿಲ್ಲ. ಅವಳು ನನ್ನ ಕಡೆ ನೋಡುತ್ತಿರಲಿಲ್ಲವಾದರೂ, ನಾನು ಮಾತ್ರ ಅವಳ ಕಡೆಯೇ ನೋಡುತ್ತಿದ್ದೆ. ಹಾಗೇ ಎಷ್ಟು ಹೊತ್ತು ಮೈಮರೆತು ನೋಡುತ್ತಿದ್ದೆನೊ.

ಸಂಜೆ ಬಾಡಿ ಮಬ್ಬುಗತ್ತಲು ಕವಿಯಲಾರಂಭಿಸಿತು. ಬ್ಯಾಂಡು ಕೇಳಲು ಬಂದ ಜನ ಒಬ್ಬೊಬ್ಬರಾಗಿ ಹೊರಟುಹೋಗಿ, ಪಾರ್ಕು ಜನ ವಿಹೀನವಾಗುತ್ತಿತ್ತು. ಅವಳು ಅಲ್ಲೇ ಕುಳಿತಿದ್ದಳು. ಅವಳನ್ನು ನೋಡುತ್ತಾ ನಾನು. ಅವಳು ಅಲ್ಲಿಂದ ಏಳುವುದೇ ಇಲ್ಲವೋ !

ಇನ್ನೇನು ಕತ್ತಲು ಕವಿಯಿತು ಎನ್ನುವಾಗ ಅವಳು ಎದ್ದು ಹೊರಟಳು. ಹೋಗುವಾಗ ನನ್ನ ಕಡೆ ನೋಡಿ, ಮಿಂಚು ನೋಟ ಹಾಯಿಸಿ ಹೊರಟಳು. ನಾನು ಅವಳು ಕುಳಿತಿದ್ದ ಕಡೆಯೇ ನೋಡುತ್ತಾ ಇದ್ದೆ. ಏನೋ ಬೆಳ್ಳಗೆ

ಬಿದ್ದಿದ್ದಹಾಗಿತ್ತು. ಏನೆಂದು ಹೋಗಿ ನೋಡಿದೆ. ಕರ್ಚೀಫ್ ! ಒಲಿಯುವ ಕತ್ತಲು ತಂಗಾಳಿಗೆ ಪರಿಮಳ ಬೆರೆಸುತ್ತಾ ಬಿದ್ದಿತ್ತು.

ಅದನ್ನು ತೆಗೆದುಕೊಂಡು, ಅವಳು ಹೋಗುತ್ತಿದ್ದ ಕಡೆ ನೋಡಿದೆ. ಹತ್ತಿರದಲ್ಲೇ ಹೋಗುತ್ತಿದ್ದಳು. ಹಾಗೇ ಹೋಗುತ್ತಾ ಒಮ್ಮೆ ನನ್ನ ಕಡೆ ತಿರುಗಿ ನೋಡಿದಳೇ ? ಏನೋ —

ಕರ್ಚೀಫನ್ನು ಕೈಗೆ ತೆಗೆದುಕೊಂಡು, ಅದನ್ನು ಅವಳಿಗೆ ಕೊಡಲೆಂದು ಅವಳು ಹೋಗುತ್ತಿದ್ದತ್ತಲೇ ವೇಗವೇಗವಾಗಿ ಹೆಜ್ಜೆ ಹಾಕಿದೆ. ಹತ್ತಿರ ವಾದಳು. ಏನೆಂದು ಮಾತಾಡಿಸಲಿ. ಹಾಗೆ ಯಾರನ್ನೂ ಮಾತಾಡಿಸಿ ನನಗೆ ಅನುಭವವಿರಲಿಲ್ಲ. ಮಾತಾಡಿಸಬೇಕೆಂದೇ ಮುಖ ಬೆವರಿಡುತ್ತಿತ್ತು. ಎದೆ ಕುಯ್ಯುತ್ತಿತ್ತು. ಹೇಗೆ ಮಾತಾಡಿಸಲಿ ?

'ಎಕ್ಸ್‌ಕ್ಯೂಸ್ ಮಿ' ಹೇಗೋ ಮಾತಾಡಿಬಿಟ್ಟೆ. ಅವಳು ನನ್ನ ಕಡೆ ತಿರುಗಿ ನೋಡಿದಳು. ಮುಂದೆ ಮಾತಾಡಲು ತೋಚದೆ, ಕರ್ಚೀಫ್ ಹಿಡಿದ ಕೈ ಮುಂದೆ ಮಾಡಿದೆ. ಅದನ್ನು ನೋಡಿ, ನಕ್ಕು 'ನೋ ಸಾರಿ. ಎಕ್ಸ್‌ಕ್ಯೂಸ್ ದಿ ಟ್ರಬಲ್. ಥ್ಯಾಂಕ್ಸ್' ಎಂದು ಕರ್ಚೀಫನ್ನು ತೆಗೆದು ಕೊಳ್ಳಲು ಕೈಚಾಚಿದಳು. ಎಷ್ಟು ಮಧುರವಾದ ಸ್ವರ, ಏನು ಸೆಳೆತ !

ಕರ್ಚೀಫನ್ನು ತೆಗೆದುಕೊಳ್ಳುವಾಗ ನನ್ನ ಕೈ ಅವಳ ಕೈಗೆ ತಗುಲಿತು. ವಿದ್ಯುತ್ ಸ್ಪರ್ಶವಾದಂತೆ ನನ್ನ ಕೈ ಕಂಪಿಸುತ್ತಿತ್ತು. ಏಕೋ ತಡಮಾಡು ತ್ತಿದಾಳೆ, ಕೈಯಿಂದ ಕರ್ಚೀಫ್ ತೆಗೆದುಕೊಳ್ಳಲು. ಅಥವಾ ನಾನೇ ಅದನ್ನು ಬಿಗಿ ಹಿಡಿದಿದ್ದೆನೋ ಅಂತೂ ಅವಳ ಬೆರಳು ನನ್ನ ಅಂಗೈಯನ್ನು ಸೋಕಿತು. ಏನು ಮಾಡುತ್ತಿದೇನೆಂದು ತಿಳಿಯದೆ ಅವಳ ಕೈ ಹಿಡಿದು ಬಿಟ್ಟಿದ್ದೆ.

ಅವಳು ಕೈ ಕೊಸರಿಕೊಳ್ಳಲಿಲ್ಲ. ಮಾದಕವಾಗಿ ನಗುತ್ತಿದ್ದಳು.

ಹಾಗೇ ಕೈಚಾಚಿ ಅವಳ ಸೊಂಟವನ್ನು ತಬ್ಬಿಕೊಂಡೆ ....

ಹೂ. ಅಂದಿನಿಂದ ಅವಳು ನನ್ನವಳಾದಳು. ಅಥವಾ ನಾನೇ ಅವಳವನಾದೆನೊ ! ಏನೋ !

ಹಾಗೇ ನಡೆಯಿತು ನಮ್ಮ ವ್ಯವಹಾರ.

ಕ್ಯಾಥರೀನಳ ಜೊತೆಯಲ್ಲಿರುವಾಗ, ಯಾವುದೊ ಕನಸಿನಲ್ಲಿದ್ದವನಂತೆ ಇರುತ್ತಿದ್ದೆ. ಆದರೆ ಅವಳನ್ನು ಬಿಟ್ಟು ಮನೆಯತ್ತ ಹೆಜ್ಜೆ ಹಾಕುವಾಗ ಏನೋ ವ್ಯಥೆ ಮನಸನ್ನು ಕವಿಯುತ್ತಿತ್ತು. ಸರಸಳಿಗಿದು ಗೊತ್ತಾದರೆ ?

ನಿಜ. ಸರಸಳಿಗಿದು ಗೊತ್ತಾಗಿದೆಯೇ ? ಯಾರೆಂದು ತಿಳಿಯದಿದ್ದರೂ, ಹೀಗೇನಾದರೂ ಆಗಿರಬೇಕೆಂದು ಊಹಿಸಿರಬಹುದೇ ಅವಳು ?

ಏನೋ ! ಅವಳು ದಿನದಿನಕ್ಕೆ ಆಳವಾಗುತ್ತಿದಾಳೆ. ಮೊದಲು ಅವಳ ಹೃದಯಾಂತರಾಳವೆಲ್ಲಾ ನನಗೆ ಅರ್ಥವಾಗುತ್ತಿತ್ತು. ಈಗ ಏಕೋ ಅರ್ಥವಾಗುತ್ತಿಲ್ಲ.

ಅಥವಾ ನಾನೇ ಬದಲಾಯಿಸಿದೇನೆಯೆ ಈಗ ? ಇಲ್ಲ. ಅವಳ ಬಗ್ಗೆ ಮೊದಲಿನಷ್ಟೇ ಪ್ರೀತಿಯಿದೆ ; ಮೊದಲಿಗಿಂತ ಹೆಚ್ಚಾಗಿ. ಮೊದಲು ಎಷ್ಟೋ ಸಲ ಅವಳನ್ನು ಅಳಿಸಿ ಗೋಳಾಡಿಸಿದೇನೆ. ಈಗ .... ಈಗ ಅವಳಿಗೆಲ್ಲಿ ನೋವಾಗುತ್ತದೆಯೋ ಎಂದೇ ಮನಸಿಗೆ ವ್ಯಥೆಯಾಗುತ್ತಿದೆ. ಈ ವಿಚಾರ ಅವಳಿಗೆ ತಿಳಿದು ....

ನಿಜ. ಅವಳಿಗೆ ಇದು ತಿಳಿದಿದೆಯೆ ?

ಹ್ಞಾ ! ಈಗ ಜ್ಞಾಪಕ ಬಂತು ................

ಒಂದು ದಿನ ರಾತ್ರಿ ತುಂಬಾ ತಡವಾಗಿ ಮನೆಗೆ ಹೋದೆ. ನನಗಾಗಿಯೇ ಕಾದು ಕುಳಿತಿದ್ದಳು ಸರಸಾ. ನನಗೆ ಅವತ್ತು ಯಾಕೋ ತುಂಬಾ ದಣಿವಾಗಿತ್ತು. ಹಾಸಿಗೆ ಕಂಡರೆ ಸಾಕು ಎನಿಸಿತ್ತು. ಹಾಕಿದ ಕೋಟು ತೆಗೆಯಲು ಕೂಡಾ ಆಗದಷ್ಟು ಆಯಾಸ. ಸರಸಾ ತಾನೇ ಕೋಟು ತೆಗೆಯಲು ಬಂದು, ಏನೋ ವಾಸನೆ ಹಿಡಿದವಳ ಹಾಗೆ ಉಸಿರು ಸೆಳೆದುಕೊಂಡಳು. ಕ್ಯಾಥರೀನ್ ಅವತ್ತು ತುಂಬಾ ವಾಸನೆಯಾದ ಪರಿಮಳ ಉಪಯೋಗಿಸಿದ್ದಳು. ನನ್ನ ಕೋಟಿಗೇನಾದರೂ ತಗುಲಿತ್ತೋ ಏನೋ. ಸಂಶಯದಿಂದ ಖಾರವಾಗಿ 'ಏನು' ಎಂದೆ. ಅವಳು ನನ್ನ ಮುಖ ನೋಡಿ 'ಏನೂ ಇಲ್ಲ. ಸಂಜೆಯಿಂದ ಶೀತವಾದ ಹಾಗಿದೆ. ಸೀನು ಬರುವ ಹಾಗಾಯಿತು. ತಡೆದುಕೊಂಡೆ' ಎಂದು ಮುಗುಳ್ನಗೆ ನಕ್ಕಳು. ಅವಳ ಮುಗುಳ್ನಗೆಯಲ್ಲಿ ನಿಜವಾಗಿಯೂ ಎಂತಹ ಮೋಹಕತೆ ಇದೆ ....

ಇನ್ನೊಂದು ದಿನವೂ ಹೀಗೆಯೇ ಆಯಿತು. ಅವತ್ತು ತಡವಾಗಿಯೇ ಹೋದೆ. ಮನೆಗೆ ಹೋಗುವ ಮುಂಚೆಯೇ ಹೊಟ್ಟೆತುಂಬಾ ತಿಂಡಿಯಾಗಿತ್ತು. ಅವತ್ತೂ ಸರಸಾ ನನಗಾಗಿ ಕಾದು ಕುಳಿತಿದ್ದಳು. ಕೋಟು ಬಿಚ್ಚಿಯಾದ ಮೇಲೆ 'ಇಷ್ಟೇಕೆ ತಡ ಇವೊತ್ತು' ಎಂದಳು. ಅವಳ ಮಾತಿನಲ್ಲೇನೋ ಅಣಕವಿದ್ದ ಹಾಗಿತ್ತು. ಏಕೆಂದು ತಿಳಿಯದೆಯೇ, ಸಿಡುಕಿ 'ತಡವಾಗಿ ಬಂದರೇನಾಯಿತು ?' ಎಂದೆ ಗಡುಸಾಗಿ. ಅವಳು ಮೃದುವಾಗಿ ನಕ್ಕು 'ಏನೂ ಆಗಲಿಲ್ಲ. ಮಾಡಿದ ಅಡಿಗೆ ಆರಿ ತಣ್ಣಗಾಯಿತಲ್ಲಾ ಎಂದು ದುಃಖ ವಾಯಿತು. ಅದಕ್ಕೇ ಇಷ್ಟೇಕೆ ತಡಮಾಡಿದಿರಿ ಎಂದು ಕೇಳಿದೆ. ತಪ್ಪಾಯಿ ತೇನು ?' ಎಂದಳು, ತೋಳಿಗೆ ಮೈಯೊರಗಿಸಿ. ನಾನು ಅವಳ ಮುಖವನ್ನೇ ನೋಡಿದೆ. ನಗುತ್ತಿದ್ದಳು. ನಗುವ ಹೂದುಟಿಗೆ ಮುದ್ದಿಡಬೇಕು ಎನ್ನಿಸಿತು. ಆದರೂ ಏಕೋ ಮುದ್ದಿಡಲಿಲ್ಲ.

ನಿಜ. ಏನೇ ಹೇಳಿದರೂ ಸರಸಾ ಸುಂದರಿ. ಅವಳೊಡನಿರುವಾಗ ಏನೋ ತೃಪ್ತಿ ಇರುತ್ತದೆ.

ಆದರೆ ಕ್ಯಾಥರೀನಳ ಜೊತೆಯಲ್ಲಿರುವಾಗ .... ಇರುವಾಗಲಷ್ಟೇ ತೃಪ್ತಿ. ಆಮೇಲೆ ಮತ್ತೆ ಅತೃಪ್ತಿಯ ಉರಿ. ಏಕೆ, ಅವಳೊಡನಿರುವಾಗಲೂ ಅತೃಪ್ತಿಯೇ. ಅವಳೊಡನಿರುವಾಗ ಅತೃಪ್ತಿಯಷ್ಟೇ ಅಲ್ಲ, ಅಶಾಂತಿಯೂ.

ಸರಸಳೊಡನಿರುವಾಗ ಏನೊಂದು ಶಾಂತಿ, ತೃಪ್ತಿ ಇರುತ್ತಿತ್ತೊ ಕ್ಯಾಥರೀನಳೊಡನಿರುವಾಗ ಅದಿರುವುದಿಲ್ಲ.

ಈಗೀಗ ಒಮ್ಮೊಮ್ಮೆ ನಾನು ತಪ್ಪು ಮಾಡಿದೆನೇನೋ ಎನಿಸುತ್ತದೆ. ನಿಜ. ಇತ್ತೀಚೆಗೆ ಆ ಭಾವನೆ ಬಲವಾಗುತ್ತಿದೆ. ಸರಸಳ ಪ್ರೀತಿಗೆ ನಾನು ದ್ರೋಹ ಮಾಡಬಾರದಾಗಿತ್ತು ಎನಿಸುತ್ತದೆ.

ದ್ರೋಹ ? ನಿಜ, ದ್ರೋಹ. ಇದು ದ್ರೋಹವಲ್ಲದೆ ಮತ್ತೇನು ? ಅವಳಿಗೆ ಹೇಳಿ ಬರುತ್ತಿದೇನೆಯೇ ಕ್ಯಾಥರೀನಳ ಹತ್ತಿರ. ಇಲ್ಲ. ಅವಳಿಗೆ ತಿಳಿಯದ ಹಾಗೆ ಬರುತ್ತೇನೆ. ಅವಳಿಗೆ ಎಲ್ಲಿ ತಿಳಿದೀತೋ ಎಂದು ಅಳುಕು ತ್ತೇನೆ. ನಾ ಮಾಡುತ್ತಿರುವುದು ದ್ರೋಹವಲ್ಲವಾದರೆ, ಈ ಅಳುಕೇಕೆ ? ಈ ಕಳ್ಳತನವೇಕೆ ?

ಸರಸಳಿಗೆ ನನ್ನ ಮೇಲೆ ಎಷ್ಟು ಪ್ರೇಮ. ಈಗಲೂ.

ಅವಳಿಗೆ ದ್ರೋಹ ಬಗೆದು ನಾನು ಪಡೆದದ್ದಾದರೂ ಏನು? ಇನ್ನಷ್ಟು ಅತೃಪ್ತಿ, ಅಶಾಂತಿ.

ಸರಸಾ ಯಾವ ತಪ್ಪು ಮಾಡಿದಳೆಂದು ಅವಳಿಗೀ ದ್ರೋಹ? ಕ್ಯಾಥರೀನ್ ಬೆಲೆವೆಣ್ಣು, ನಿಜ, ಬೆಲೆವೆಣ್ಣು. ಇವಳಿಗಾಗಿ ಸರಸಳಿಗೆ, ನನ್ನ ಜೀವನದಲ್ಲಿ ತನ್ನ ಜೀವನವನ್ನು ಬೆರೆಸಿಬಿಟ್ಟ ಸರಸಳಿಗೆ, ದ್ರೋಹ ಬಗೆಯುವುದೇ? ನನ್ನನ್ನು ಪ್ರೀತಿಸಿದ್ದೇ ಅವಳ ಅಪರಾಧವೇ? ನನ್ನ ಪ್ರೇಮಕ್ಕಾಗಿ ತನ್ನ ಮೈ ಮುಪ್ಪು ಮಾಡಿಕೊಂಡದ್ದೇ ಅವಳ ತಪ್ಪೇ?

ನಾನಿಂದೇನು ಮಾಡಿದೆ? ಈ ಪಾಪಕ್ಕೆ ಹೇಗೆ ಮನಸು ಕೊಟ್ಟೆ. ನಾನು ಮಾಡಿದುದು ತಪ್ಪು, ತಪ್ಪು, ಶತಾಪರಾಧ.

ನಿಶ್ಚಯವಾಗಿಯೂ ಇವತ್ತು ಹೋಗಿ ಸರಸಳಿಗೆ ನಾನು ಮಾಡಿದ ತಪ್ಪು ತಿಳಿಸಬೇಕು. ತಿಳಿಸಿ ಅವಳ ಕ್ಷಮೆ ಬೇಡಬೇಕು.

ಈ ಬಾರಿಯೊಮ್ಮೆ ಸರಸಾ ನನ್ನನ್ನು ಕ್ಷಮಿಸಿಬಿಟ್ಟರೆ. ಮತ್ತೆಂದೂ ಇಂಥ ಅಪರಾಧ ಘಟಿಸದ ಹಾಗೆ ನಡೆದುಕೊಳ್ಳುತ್ತೇನೆ. ಖಂಡಿತವಾಗಿಯೂ.

ಆದರೆ ಸರಸಾ ನನ್ನನ್ನು ಕ್ಷಮಿಸುತ್ತಾಳೆಯೋ? ಏನೋ. ಏನಾದರಾಗಲಿ, ಕ್ಷಮೆ ಬೇಡುವುದು ನನ್ನ ಹೊಣೆ. ಕ್ಷಮಿಸುವುದು ಅವಳ ಕೃಪೆ. ನಿಜ, ಸರಸಾ ಶುದ್ಧ ಸ್ನೇಹಮೂರ್ತಿ. ಖಂಡಿತವಾಗಿಯೂ ಕ್ಷಮಿಸುತ್ತಾಳೆ.

ನನ್ನ ಈ ದ್ರೋಹದ ವಿಚಾರ ತಿಳಿದಾಗ ಎಷ್ಟು ದುಃಖಪಡುತ್ತಾಳೊ, ಎಷ್ಟು ಕಣ್ಣೀರುಗರೆಯುತ್ತಾಳೊ ........

ಆದರೆ, ಆದರೆ ........ ಅವಳಿಗೀ ವಿಚಾರ ಈಗಾಗಲೇ ಗೊತ್ತಾಗಿರಬಹುದೇ? ಹೇಗಾದರೂ, ಯಾರಾದರೂ, ಹೇಳಿರಬಹುದೇ?

ಇಲ್ಲವಾದರೆ, ಆ ಎರಡು ದಿನ ರಾತ್ರಿ ಅವಳು ನಕ್ಕದ್ದರ ಅರ್ಥವೇನು? ನಗಲು ಏನು ಕಾರಣವಿತ್ತೆಂದು ನಕ್ಕಳು ........ ತಿಳಿದಿರಬಹುದೇ. ನನ್ನ ನಾಚಿಕೆಗೇಡಿತನ ನೋಡಿ ನಕ್ಕಿರಬಹುದೇ ........

.. ಏನೋ – ಅದಕ್ಕೆ ಅವಳೇ ಉತ್ತರ ಹೇಳಬೇಕು.

ನಿಜ. ಇವೊತ್ತು ತಪ್ಪೊಪ್ಪಿಕೊಂಡಮೇಲೆ, ಅವಳು ನನ್ನನ್ನು ಕ್ಷಮಿಸಿದ್ದಾದಮೇಲೆ ಅವಳನ್ನೇ ಕೇಳುತ್ತೇನೆ, ಅವತ್ತೇಕೆ ಹಾಗೆ ನಕ್ಕೆ ಅಂತ.

ಮೊದಲು ತಪ್ಪೊಪ್ಪಿಗೆ, ಆಮೇಲೆ ಕ್ಷಮೆ, ಅದಾದಮೇಲೆ ನಗುವಿನ ಕಾರಣ.

ನಿಜ. ಎಲ್ಲಕ್ಕೂ ಮೊದಲು ತಪ್ಪೊಪ್ಪಿಗೆ!

ಇವತ್ತು ರಾತ್ರಿ ಸರಸಳಿಗೆ, ನಾನೆಂಥ ನೀಚತನ ಮಾಡಿದೆನೆಂದು ಹೇಳಿ ಬಿಡುತ್ತೇನೆ. ಖಂಡಿತವಾಗಿಯೂ .... ಖಂಡಿತವಾಗಿಯೂ .... ಸರಸಳಾ ಣೆಗೂ ........ ''

೩

ಅಂದು ರಾತ್ರಿ ಅವನ ಮನಸಿನಲ್ಲೊಂದು ವಿಚಿತ್ರ ಪರಿಣಾಮವಾಗಿತ್ತು – ಅಂದೇ ಸಂಜೆ ಮಾಡಿದ ನಿರ್ಧಾರದಿಂದ. ಏನೋ ಒಂದು ತೃಪ್ತಿ ಇತ್ತು.

ಊಟ ಮುಗಿಸಿ, ಮಲಗುವ ಕೋಣೆಗೆ ಬಂದು, ಮೃದುವಾದ ಹಾಸಿಗೆಯಮೇಲೆ ಮಲಗಿಕೊಂಡ. ಹಾಲು ಬಣ್ಣದ ಮೃದುವಾದ ಬೆಳ ಕಿನ ದೀಪ ಆಳೆತ್ತರದ ನಿಲುವುಗನ್ನಡಿಯಲ್ಲಿ ಪ್ರತಿಫಲಿಸಿ,- ಕೋಣೆಯಲ್ಲಿ ಏನೋ ಒಂದು ಹೊಸ ಬಗೆಯ ಬೆಳಕನ್ನು ಹರಡಿತ್ತು, ಅವನ ಮನಸಿನಲ್ಲೂ.

ಅರ್ಥವಾಗದೊಂದು ನೂತನ ಉತ್ತೇಜಕ ಭಾವತರಂಗ ಅವನ ಎದೆಯಲ್ಲಿ ತೆರೆತೆರೆ ತೂಗುತ್ತಿತ್ತು. ಅತೃಪ್ತಿಯ ವಿಷಗಳಿಗೆಯಲ್ಲಿ, ಅವನ ಮೈಯನ್ನು ಸೆಳೆದೊಯ್ದ ಚೆಲುವೆಯ ಬಲೆಯಿಂದ ಅವನನ್ನು ಬಿಡಿಸಿತೆಂದ ನಿರ್ಧಾರ, ಅವನೆದೆಯಲ್ಲಿ ಉರಿದೆದ್ದ ಕಾಳ್ಗಿಚ್ಚನ್ನು ಆರಿಸುತ್ತಿತ್ತು.

ಹಿಂದೆಂದೂ ಅನುಭವಿಸದೊಂದು ತೃಪ್ತಿ ಬೆರೆತ ದುಃಖ ಅವನೆದೆಯಲ್ಲಿ ಏರುತ್ತಿತ್ತು. ಅದನ್ನೇ ಯೋಚಿಸುತ್ತಾ ಮಲಗಿದ. ಕಣ್ಣು ಉರಿಯುತ್ತಿತ್ತು.

ಮುಚ್ಚಿದ್ದ ಬಾಗಿಲನ್ನು ಮೃದುವಾಗಿ ತೆರೆದ ಸದ್ದಾಯಿತು. ಹಾಗೇ ತಲೆ ತಿರುಗಿಸಿ ನೋಡಿದ. ತಾಂಬೂಲದ ತಟ್ಟೆ ಹಿಡಿದು, ಸರಸಾ ನಿರಿ ಚಿಮ್ಮಿಸಿ ಹೊಸಲು ದಾಟಿ ಬರುತ್ತಿದ್ದಳು. ಅವಳ ಬೆನ್ನ ಹಿಂದೆ ತೆಳ್ಳನೆಯ ಬಾಗಿಲ ತೆರೆ. ಹಾಗೇ ಅವಳನ್ನು ದಿಟ್ಟಿಸಿ ನೋಡಿದ. ಇವನಿಗಾಗಿ ಯಾವುದೋ ದೇವತೆ ಬಂದು ಬಾಗಿಲಲ್ಲಿ ನಿಂತಂತಿತ್ತು.

ಮೆಲ್ಲನೆ ನಡೆದು ಬಂದು ಸರಸಾ ಮಂಚದ ಮೇಲೆ ಮಲಗಿದ್ದ ಇವನ ಪಕ್ಕದಲ್ಲಿ ಕುಳಿತು, ಸದ್ದು ಮಾಡದೆ ವೀಳೆಯದೆಲೆಗೆ ಸುಣ್ಣ ಹಚ್ಚ

ಲಾರಂಭಿಸಿದಳು. ಅವನೂ ಸ್ವಲ್ಪ ಹೊತ್ತು ಅವಳನ್ನು ಮಾತಾಡಿಸದೆ ಹಾಗೇ ಮಲಗಿದ್ದ. ಯಾವುದೋ ಭಾವ ಪ್ರವಾಹ ಅವನೆದೆಯಲ್ಲಿ ನೆರೆಯೇರುತ್ತಿತ್ತು.

ಸ್ವಲ್ಪ ಹೊತ್ತು ಹಾಗೇ ಇದ್ದ. ಸರಸಳೇ ಮೌನ ಮುರಿದು, 'ವೀಳೆಯದೆಲೆ ತೆಗೆದುಕೊಳ್ಳಿ' ಎಂದಳು. ಹಾಗೇ ಅವಳನ್ನು ದಿಟ್ಟಿಸಿದ. ವೀಳೆಯದೆಲೆ ಕೊಡಲೆಂದು ಬಾಗಿದ ಅವಳ ಮೈಯ ರೇಖೆರೇಖೆಯಲ್ಲೂ ಪ್ರೇಮ, ಸ್ನೇಹ ತುಂಬಿ ತುಳುಕುತ್ತಿತ್ತು.

ಈ ದೇವತೆಗೆ ತಾನು ಮಾಡಿದ ದ್ರೋಹ ನೆನೆದು, ಪಶ್ಚಾತ್ತಾಪದ ದುಃಖ ಕೋಡಿಯೊಡೆದು ಬಂತು.

ಎದ್ದು ಅವಳನ್ನು ತಬ್ಬಿಕೊಂಡು, ಎದೆಯಲ್ಲಿ ಮುಖ ಮರೆಸಿಕೊಂಡ. ಅವಳ ಎದೆ ತೇವವಾಗುತ್ತಿತ್ತು. ಅವಳೂ ಅವನನ್ನು ತಬ್ಬಿಕೊಂಡಳು. ಅವನ ಯಾತನೆ ಅವಳಿಗೂ ಅರಿವಾದ ಹಾಗೆ, ಅವಳ ಕಣ್ಣಲ್ಲೂ ಕಂಬನಿ ಯೊಡೆಯುತ್ತಿತ್ತು.

ಮೃದುವಾಗಿ, ಎದೆಯಲ್ಲಿ ಹುದುಗಿಕೊಂಡ ಅವನ ಮುಖವನ್ನು ಹೊರಗೆ ತೆಗೆದು, ಕೆನ್ನೆಗೊತ್ತಿಕೊಂಡಳು; ಏನೂ ಮಾತಾಡಿಸಲಿಲ್ಲ. ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು.

ಕಂಬನಿಯ ರೂಪದಲ್ಲಿ ತನ್ನ ಪಾಪ ತೊಳೆದ ಹಾಗಾಗಿ, ಹೃದಯ ಹಗುರಾದ ಮೇಲೆ, ಅವನೇ ಅವಳನ್ನು ಮಾತಾಡಿಸಿದ –

'ಸರಸಾ.' ಕಂಬನಿಯಲ್ಲಿ ತೊಯ್ದು ಅವನ ಮಾತೂ ಮೃದುವಾಗಿತ್ತು.

'ಏನು ?'

'ನನ್ನನ್ನು ಕ್ಷಮಿಸುತ್ತೀಯಾ ಸರಸಾ.'

'ಏಕೆ ?'

'ಏಕಾದರೂ, ಏನು ಮಾಡಿದ್ದರೂ –'

'ನೀವು ಕೇಳಬೇಕೇ ನನ್ನನ್ನು ?'

'ಕೇಳಬೇಕಾದ ಹಾಗೆ ಮಾಡಿಕೊಂಡಮೇಲೆ, ಕೇಳಬೇಕಾದ್ದೆ. ಹೇಳು ಸರಸೀ ನನ್ನನ್ನು ಕ್ಷಮಿಸುತ್ತೀಯಾ ?'

'ಹೂ.'

'ಏನು ಮಾಡಿದ್ದರೂ.'

'ಏನು ಮಾಡಿದ್ದರೂ ನೀವು ನನ್ನವರೇ ಅಲ್ಲವೇ ?'

'ಹೇಳಲೇ ?'

'ಹೂ. ಹೇಳಿ.'

ಹೇಳಿ ಎಂತ ಎನ್ನಿಸಿಕೊಂಡದ್ದೇನೋ ಆಯಿತು. ಆದರೆ ಹೇಗೆ ಹೇಳುವುದು. ಹೇಳಬೇಕೆಂಬ ನಿರ್ಧಾರವೇನೋ ಇದೆ. ಆದರೆ ಹೇಳಲು ಮಾತುಗಳೇ ಸಿಗುತ್ತಿಲ್ಲ ನಾಲಗೆಗೆ.

'ಏಕೆ. ಹೇಳುವುದಿಲ್ಲವೇ ?'

ಅವಳ ಮುಖ ನೋಡದೆ, ಕ್ಯಾಥರೀನಳೊಂದಿಗೆ ತಾನು ಮಾಡಿದುದನ್ನೆಲ್ಲಾ ಒಂದೇ ಉಸಿರಿನಲ್ಲಿ ಹೇಳಿಬಿಟ್ಟ. ಅವನ ಮಾತು ಮುಗಿಯಬಂದ ಹಾಗೆ ಮತ್ತೆ ಅವನ ಕಣ್ಣಲ್ಲಿ ಹನಿ ತುಂಬುತ್ತಿತ್ತು. ಅವನು ಕಥೆ ಮುಗಿಸಿ ಅವಳನ್ನು ನೋಡಲಾರದಂತೆ ತೋಳಲ್ಲಿ ಮುಖ ಮುಚ್ಚಿಕೊಂಡ.

ಸರಸಾ ಅವನನ್ನು ತಬ್ಬಿಕೊಂಡು, ಮೆಲ್ಲಗೆ ಅವನ ಮುಖ ಹಿಡಿದು, ಕಂಬನಿ ಒರೆಸಿದಳು.

ಅವನು ಅವಳ ಮುಖವನ್ನೇ ನೋಡಿದ. ಅವಳ ತುಟಿಯ ಮೇಲೆ ಮಧುರವಾದ ಕಿರುನಗೆ ಮಿನುಗುತ್ತಿದೆ.

'ನನ್ನನ್ನು ಕ್ಷಮಿಸುತ್ತೀಯಾ ಸರಸೀ' ಎಂದ.

'ಯಾವುದಕ್ಕೆ ?'

'ಆ ನಾಚಿಕೆಗೇಡಿನ ಕಥೆ ಮತ್ತೆ ಹೇಳಬೇಕೇ ?

'ಅದಕ್ಕಾಗಿಯೇ. ಯಾವೊತ್ತೊ ಕ್ಷಮಿಸಿಬಿಟ್ಟಿದೇನೆ.'

ಅವಳ ಮಾತು ಕೇಳಿ ಅವನು ದಿಗ್ಭ್ರಾಂತನಾದ. 'ಅಂದರೆ ....'

'ಅಂದರೆ, ನೀವು ಹೇಳುವುದಕ್ಕೆ ಮೊದಲೇ ನನಗಿದು ಗೊತ್ತಿತ್ತು.'

'ಯಾರು ಹೇಳಿದರು ?'

'ಹೆಂಗಸಿಗೆ ಯಾರೂ ಹೇಳದೆಯೇ ತಿಳಿಯುತ್ತದೆ.'

'ತಿಳಿದಿದ್ದರೂ ಸುಮ್ಮನಿದ್ದೆಯಾ ?' ಗಳಿಗೆಗಳಿಗೆಗೆ ಅವನ ಆಶ್ಚರ್ಯ ಹೆಚ್ಚುತ್ತಿತ್ತು.

'ಸುಮ್ಮನಿರದೆ ಏನು ಮಾಡಬೇಕಿತ್ತು ?'

‘ ಗಂಡ ಹೀಗಾದನೆಂದು ತಿಳಿದರೆ ಎಷ್ಟೋ ಜನ ಗದ್ದಲ ಮಾಡುತ್ತಾರೆ, ಎಷ್ಟೋ ಜನ ಪ್ರಾಣ ಕಳೆದುಕೊಳ್ಳುತ್ತಾರೆ. ನೀನು .... ’

‘ ಶ್. ಸುಮ್ಮನಿರಿ.’

‘ ಏಕೆ ? ’

‘ಮಕ್ಕಳಹಾಗೆ ಮಾತಾಡಬೇಡಿ. ಹಾಗೆ ಗದ್ದಲ ಮಾಡೋದೂ ಪ್ರಾಣ ಕಳೆದುಕೊಳ್ಳೋದೂ ಎಲ್ಲಾ ಕಥೆ ಕಾದಂಬರಿಗಳಲ್ಲಿ. ಎಂದಾದರೂ ನೀವು ಹಿಂದಕ್ಕೆ ಬರಲೇಬೇಕು. ಹಾಗಿರುವಾಗ ಸುಮ್ಮನೆ ಗದ್ದಲ ಮಾಡಬೇಕೇ ? ’

‘ ಹಾಗಾದರೆ ನಾನು ಹಿಂದಿರುಗಿ ಬರುವೆನೆಂಬುದು ತಿಳಿದಿತ್ತೆ ? ’

‘ ಹೂ. ತಿಳಿದಿತ್ತು.’

‘ ಹೇಗೆ ? ’

‘ಇದೂ ಅಷ್ಟೆ. ಯಾರೂ ಹೇಳಿಕೊಡದೆಯೇ ಹೆಂಗಸರಿಗೆ ತಿಳಿಯುತ್ತೆ’ ಎಂದು ಹೇಳಿ ಸರಸಾ ಮಂಚದಿಂದೆದ್ದು, ಕಿಟಕಿಯ ಹತ್ತಿರ ಹೋದಳು. ಕಿಟಕಿಯ ಬಾಗಿಲು ಹಾಕಿತ್ತು. ಅದನ್ನು ತೆರೆದಳು. ಕಿಟಕಿಗೆ ನೇರವಾಗಿದ್ದ ಬೀದಿಯ ದೀಪದ ಪ್ರಕಾಶಮಾನವಾದ ಬೆಳಕು ಕಣ್ಣು ಕುಕ್ಕುವಂತೆ ಒಳಗೆ ಬಂತು. ಸರಸಾ ಅದನ್ನೇ ನೋಡುತ್ತಾ ನಿಂತಿದ್ದಳು.

‘ ಛಿ. ಕಿಟಕಿ ಮುಚ್ಚಿಬಿಡು ಸರಸಾ. ಅಸಹ್ಯವಾದ ಬೆಳಕು ಅದು.’

‘ ಇರಲಿ. ಒಂದು ಗಳಿಗೆ ಇಲ್ಲಿ ಬನ್ನಿ.’

‘ ಏಕೆ ? ’

‘ ಹೇಳುತ್ತೇನೆ. ಬನ್ನಿ.’

ಅವನೂ ಎದ್ದು ಕಿಟಕಿಯ ಹತ್ತಿರ ಹೋದ. ಸರಸಾ ಅವನನ್ನು ತಬ್ಬಿಕೊಂಡು ನಿಂತುಕೊಂಡು, ಬೀದಿಯ ದೀಪದತ್ತ ಕೈ ತೋರಿಸಿ, ‘ ಅದನ್ನು ನೋಡಿ ’ ಎಂದಳು. ಅವನೂ ಅದನ್ನು ನೋಡಿದ. ಆದರೆ ಏನೂ ಅರ್ಥವಾಗಲಿಲ್ಲ.

‘ ನೋಡಿದಿರಾ ? ’

‘ ಹೂ.’

‘ ತುಂಬಾ ಉಜ್ವಲವಾಗಿದೆಯಲ್ಲವೇ ? ’

'ಹೌದು.'

'ಇದನ್ನು ನೋಡಿ' ಎಂದು ಕೋಣೆಯೊಳಗಿನ ಹಾಲುಬಣ್ಣದ ದೀಪವನ್ನು ತೋರಿಸಿದಳು. ಅದನ್ನು ನೋಡಿದ. ಆಗಲೂ ಅವನಿಗೇನೂ ಅರ್ಥವಾಗಲಿಲ್ಲ. ಸಮಸ್ಯೆ ಜಟಿಲವಾಯಿತು.

'ನೋಡಿದಿರಾ ?'

'ಹೂ. ನೋಡಿದೆ.'

'ಬೀದಿಯ ದೀಪಕ್ಕೆ ಹೋಲಿಸಿದರೆ, ಇದು ಮಂಕು ಅಲ್ಲವೇ ?'

'ಹೌದು.'

ಬೀದಿಯ ದೀಪ, ಇದಕ್ಕಿಂತ ಉಜ್ವಲವಾಗಿದೆ ಎಂತ ಎಷ್ಟು ಹೊತ್ತು ಅದರ ಬೆಳಕಿನಲ್ಲಿರಲು ಸಾಧ್ಯ ಹೇಳಿ ? ಎಷ್ಟು ಹೊತ್ತಾದರೂ ಮತ್ತೆ ಈ ದೀಪದ ಬೆಳಕಿಗೇ ಬರಬೇಕು. ಆ ದೀಪ ಎಷ್ಟು ಪ್ರಕಾಶಮಾನವಾಗಿದ್ದರೂ ಬೀದಿಯ ದೀಪ, ಇದು ಎಷ್ಟು ಮಂಕಾಗಿದ್ದರೂ ಮನೆಯ ದೀಪ.'

'ಅದೆಲ್ಲಾ ಸರಿಯೆ. ನನಗೂ ಗೊತ್ತಾಗುತ್ತೆ. ಆದರೆ ನಿನ್ನ ಮಾತು ಮಾತ್ರ ನನಗೆ ಅರ್ಥವಾಗುತ್ತಿಲ್ಲ.'

'ನಿಜವಾಗಿಯೂ ?'

'ನಿಜವಾಗಿಯೂ.'

'ಹಾಗಾದರೆ ನಾನೇ ಒಗಟು ಬಿಡಿಸಬೇಕೂ ಅನ್ನಿ.'

'ಹೂ.'

ಆ ಬೀದಿಯ ದೀಪ – ಕ್ಯಾಥರೀನ್ !' ಎಂದಳು. ಅವಳ ಮಾತು ಕೇಳಿದ ಕೂಡಲೇ ಆವನ ಕತ್ತಲು ಕವಿದ ಮನಸಿನಲ್ಲಿ ಚಕ್ಕನೆ ಬೆಳಕು ಬಿದ್ದ ಹಾಗಾಯಿತು.

ಹಾಗೇ ಅವಳ ಬಗ್ಗೆ ಅಭಿಮಾನವೂ ಉಕ್ಕಿಬಂತು. ತಬ್ಬಿಕೊಂಡ. ಮೆಚ್ಚುಗೆಯನ್ನು ತೋರಿಸಲು ಮತ್ತೇನು ಮಾರ್ಗವಿತ್ತು ?

ಆವಳನ್ನು ತಬ್ಬಿಕೊಂಡೇ 'ಆ ಬೆಳಕು ಅಸಹ್ಯದ ಬೆಳಕು. ಕಿಟಕಿ ಬಾಗಿಲು ಹಾಕಿಬಿಡು' ಎಂದ.

'ಹಾಕಿಬಿಡಲೇ ?' ಎಂದು ನಗುತ್ತಾ ಕೇಳಿದಳು.

'ಹೂ ಹಾಕಿಬಿಡು' ಎಂದ.

ಅವಳು ಕಿಟಕಿಯ ಬಾಗಿಲು ಹಾಕಿಬಿಡುವುದರೊಳಗೆ ಇವನು ದೀಪ ಆರಿಸಿದ.

ಇಬ್ಬರೂ ಮಲಗಿಕೊಂಡಿದ್ದರು. ಅವನ ತೋಳತೆಕ್ಕೆಯಲ್ಲಿ ಮಲಗಿದ ಸರಸಾ ಸ್ವಲ್ಪ ಹೊತ್ತು ಸುಮ್ಮನಿದ್ದು, ನಂತರ 'ಸ್ವಲ್ಪ ದೀಪ ಹಾಕಲೇ' ಎಂದಳು.

'ಏಕೆ ?'

'ನಿಮ್ಮ ಮುಖ ನೋಡಬೇಕಾಗಿತ್ತು.'

'ಏಕೆ ?'

'ಮುದುಕರಾಗಿದ್ದೀರೋ ಏನೋ ಎಂತ' ಎಂದವಳೇ ಅವನ ಎದೆಯಲ್ಲಿ ಮುಖ ಮರೆಸಿಕೊಂಡು ನಗಲಾರಂಭಿಸಿದಳು.

'ಅಯ್ಯೋ, ಪಾಪಿ!' ಎಂದು ಅವನು ಅವಳನ್ನು ತಬ್ಬಿಕೊಂಡ.

ಮೊದಲೆರಡು ಬಾರಿಯ ಅವಳ ನಗು ಅವನಿಗೆ ರಹಸ್ಯವಾಗಿತ್ತು. ಈಗ ಮೂರು ಬಾರಿಯ ನಗುವೂ ಅರ್ಥವಾಗಿತ್ತು.

# ಸಾಕ್ಷಾತ್ಕಾರ

## ೧

ಎಲ್ಲರಿಗೂ ಆಶ್ಚರ್ಯ ?

ಹೇಗಿದ್ದವನು ಹೇಗಾಗಿಹೋದ. ಅವನ ಷೋಕು ಏನು, ಸೊಗಸೇನು, ವಿಲಾಸ ವೈಭವವೇನು – ಒಳ್ಳೆ ಮೊಗಲಾಯಿ ದರಬಾರು.

ಈಗ, ಮೂರು ಮೂರು ದಿನ ಬೆಳೆದ ಗಡ್ಡ, ಗರಿಮುರಿದು ಮಾಸಿದ ಬಟ್ಟೆ. ಯಾವುದಾದರೂ ಸರಿಯೇ. ಇದ್ದರೂ ಆಯಿತು, ಇಲ್ಲವಾದರೂ ಆಯಿತು. ಅದು ಹೋಗಲಿ. ಮೊದಲಿನ ಹಾಗೆ ಸ್ನೇಹಿತರ ಜೊತೆಗೆ ಓಡಾಡುವುದನ್ನೂ ಬಿಟ್ಟುಬಿಟ್ಟಿದ್ದ. ಯಾವಾಗಲಾದರೂ ಸಿಕ್ಕಿದರೆ ಎರಡು ಮಾತು ; ಅದೂ ಹೆಚ್ಚಿಗೆ ಇಲ್ಲ.

ಎಲ್ಲಕ್ಕಿಂತ ಹೆಚ್ಚಿಗೆ ಆಶ್ಚರ್ಯವನ್ನುಂಟುಮಾಡಿದ್ದು, ಹೆಣ್ಣಿನ ಬಗ್ಗೆ ಅವನು ತೋರಲಾರಂಭಿಸಿದ್ದ ಗೌರವ ಭಾವ.

ಬಹುದಿನದಿಂದ ಅವನ ಜೊತೆಯಲ್ಲಿ ಓಡಾಡುತ್ತಿದ್ದ ನನಗೆ, ಎಲ್ಲರಿಗಿಂತ ಹೆಚ್ಚಾಗಿ ಆಶ್ಚರ್ಯವಾಗಿತ್ತು. ನನ್ನ ಅವನ ಸ್ನೇಹ ಬರೀ ಮಾತು ಕಥೆಗಳಲ್ಲೇ ಮುಗಿಯದೆ, ಜೊತೆಗೆ ಊಟ ಉಪಚಾರಗಳಲ್ಲೇ ಮುಗಿಯದೆ ಎಷ್ಟೋ ಮಜಲು ಮುಂದೆ ಹೋಗಿತ್ತು. ಎಂತಲೇ ಅವನ ಅಂತರಂಗದ ಎಷ್ಟೋ ವಿಚಾರಗಳೂ ನನಗೆ ಗೊತ್ತಾಗಿತ್ತು.

ಆಗಲೂ ಅವನದೊಂದು ಬಗೆಯಲ್ಲಿ ವಿಚಿತ್ರ ಜೀವನ. ಸಾಧಾರಣವಾಗಿ ಜನ ತಮ್ಮ ಬಾಳಿನಲ್ಲಿ ಯಾವುದನ್ನು ಮುಚ್ಚಿಡಬಯಸುತ್ತಾರೋ,

ಅಂಥದಾವುದನ್ನೂ ಅವನು ಮುಚ್ಚಿಡುತ್ತಿರಲಿಲ್ಲ, ಆ ಪ್ರಯತ್ನವನ್ನೇ ಮಾಡುತ್ತಿರಲಿಲ್ಲ. ಈ ದೃಷ್ಟಿಯಲ್ಲವನ ಬಾಳು ತೆರೆದ ಪುಸ್ತಕ.

ಬುದ್ಧಿವಾದಿಗಳು ಎನ್ನುತ್ತಾರಲ್ಲಾ ಆ ಜಾತಿಯವನು ಅವನು. ಶುದ್ಧ ನಾಸ್ತಿಕ. ದೇವರನ್ನು ನಂಬುವುದು ಬಿಡುವುದು ಹೋಗಲಿ, ಯಾವುದನ್ನೂ ನಂಬುತ್ತಿರಲಿಲ್ಲ. ಯಾವುದರ ಬಗ್ಗೆಯೂ ಭಕ್ತಿಭಾವವಿರಲಿಲ್ಲ; ಇತರರ ನಂಬಿಕೆ, ಶ್ರದ್ಧೆಗಳ ಬಗ್ಗೆಯೂ ಗೌರವವಿರಲಿಲ್ಲ – ತಾತ್ಸಾರವಾಗಿ ನಕ್ಕು ಬಿಡುತ್ತಿದ್ದ.

ಅವನ ಮಟ್ಟಿಗೆ ಬಾಳು ಒಂದು ನಿತ್ಯ ಸುಖ ಸಂಶೋಧನೆ. ತನ್ನ ಸುಖಕ್ಕೆ ಆಗದುದಕ್ಕೆ ಯಾವುದಕ್ಕೂ ಅವನ ಬಾಳಿನಲ್ಲಿ ಎಡೆ ಇರಲಿಲ್ಲ. ಒಮ್ಮೆ ಸುಖಕ್ಕೆ ಸಾಧಕವಾಗಿದ್ದುದೂ, ಉಪಯೋಗ ಮುಗಿಯಿತೆಂದರೆ ಕಸದಬುಟ್ಟಿಗೆ ಸೇರಬೇಕಾದದ್ದೆ. ಇದರಲ್ಲಿಯೂ ಅದೂ ಇದು ಭೇದವೇ ಇಲ್ಲ. ತಲೆಗೆಲ್ಲಾ ಒಂದೇ ಮಂತ್ರ.

ನಿರ್ಜೀವ ವಸ್ತುಗಳ ಬಗ್ಗೆ ಹೀಗೆ ನಡೆದುಕೊಳ್ಳುವುದಿರಲಿ, ಸಜೀವ ವಸ್ತುಗಳ ಬಗ್ಗೆಯೂ ಇದೇ ವರ್ತನೆಯೇ.

ಎಲ್ಲಕ್ಕಿಂತ ಹೆಚ್ಚಾಗಿ ನನ್ನನ್ನು ಕೆರಳಿಸುತ್ತಿದ್ದುದು, ಅವನು ತನ್ನ ಕಾಮಕ್ಕೆ ಬಳಸಿಕೊಂಡ ಹೆಂಗಸರನ್ನು, ಆ ಕೆಲಸವಾದ ಮೇಲೆ ಕಾಣುತ್ತಿದ್ದ ತಾತ್ಸಾರವಾದ ರೀತಿ; ಸೇದಿಯಾದಮೇಲೆ ಸಿಗರೇಟು ತುಂಡನ್ನು ಕಾಲಕೆಳಗೆ ಹಾಕಿ ಒರೆಸಿಬಿಡುವ ಹಾಗೆ, ನಿರ್ಲಕ್ಷ್ಯವಾಗಿ ತಳ್ಳಿಹಾಕಿ ಬಿಡುತ್ತಿದ್ದ. ತನ್ನ ನಡತೆಯಿಂದ ನಂಬಿದವರಿಗೆ, ಒಲಿದು ಬಂದವರಿಗೆ ಎಷ್ಟು ದುಃಖವಾದೀತು ಎಂಬುವನ್ನು ಕೂಡಾ ಪರಿಗಣಿಸುತ್ತಿರಲಿಲ್ಲ.

ಅವನ ಈ ಇಪ್ಪತ್ತೆರಡನೆಯ ವಯಸ್ಸಿನ ಹೊತ್ತಿಗೆ ಅಷ್ಟೇ ಜನ ಹುಡುಗಿಯರನ್ನಾದರೂ ನೋಡಿದ್ದ. ಅವನಿಗೆ ಅವರ ಹೆಸರು ಕೂಡಾ ಜ್ಞಾಪಕವಿರಲಿಲ್ಲ. ಹಾಗೆ ಬಂದು ಹೋದವಳೇ ಶೀಲಾ.

ಶೀಲಾ ಆಂಗ್ಲೋ–ಇಂಡಿಯನ್ ಹುಡುಗಿ. ರೈಲ್ವೆ ಗಾರ್ಡ್ ಸ್ಮಿತ್ತರ ಮಗಳು. ಇವನ ಮನೆಯ ಸಮೀಪದಲ್ಲೇ ಅವರ ಮನೆಯೂ ಇತ್ತು. ಶೀಲಾ ನೋಡಲು ಕಾಫಿ ಬಣ್ಣದ ಮೈಯವಳಾದರೂ, ಅಂಗಾಂಗದ ಮಾಟದಿಂದ ಚೆಲುವೆ. ಕಿರಿಸ್ತಾನರ ಹುಡುಗಿಯಾದರೂ, ಗಂಡೆಂದರೆ ಹಾಯ್ದು

ಕೊಂಡು ಹೋಗುವ ಜಾತಿಯವಳಲ್ಲ, ಸಾಭ್ಯಸ್ತೆ. ಹೈಸ್ಕೂಲಿನಲ್ಲಿ ಓದುತ್ತಿದ್ದಳು. ಶಾಲೆಗೆ ಹೋಗುವಾಗ ಬರುವಾಗ ಇವನ ಮನೆಯ ಮುಂದೆಯೇ ಹಾದು ಹೋಗಬೇಕು.

ಆ ಹುಡುಗಿಯಮೇಲೆ ಇವನ ಕಣ್ಣು ಬಿತ್ತು. ಒಂದು ದಿನ ಅವಳು ಮನೆಯ ಮುಂದೆ ಹಾದುಹೋಗುತ್ತಿರುವಾಗ, ಇವನು ಅವಳ ಕಡೆಯೇ ನೋಡಿ, ಶಿಳ್ಳು ಹಾಕಿ ಕಣ್ಣು ಹಾರಿಸಿ 'ನೋಡು! ಇವತ್ತಲ್ಲ ನಾಳೆ ಈ ಮಿಕ ನನ್ನದೇ' ಎಂದ – ಗಟ್ಟಿಯಾಗಿ. ಆ ಹುಡುಗಿಯ ವಿಚಾರ ಗೊತ್ತಿದ್ದ ನಾನು ರೇಗಿ 'ಛೀ. ಏನು ಅಸಹ್ಯದ ಮಾತಾಡುತ್ತಿ. ಸುಮ್ಮನಿರು. ನಾಚಿಕೆಯೇ ಇಲ್ಲವೆ ನಿನಗೆ' ಎಂದೆ. 'ಏನೆಂದೆ – ನಾಚಿಕೆಯೇ. ಅಲ್ಲೋ, ಹಸಿವೆಯಾದಾಗ ಕಣ್ಣಿಗೆ ಒಳ್ಳೆ ಮಿಠಾಯಿ ಬಿದ್ದರೆ, ಸ್ಪಷ್ಟವಾಗಿ ಬೇಕು ಎನ್ನುವುದಕ್ಕೂ ನಾಚಿಕೆಪಡಬೇಕೇ?' ಎಂದ.

'ಮಿಠಾಯಿಯೂ, ಹುಡುಗಿಯೂ ಎರಡೂ ಒಂದೇ ಅಲ್ಲ' ಎಂದೆ. 'ನಿನಗೆ ಗೊತ್ತಿಲ್ಲ. ಮಿಠಾಯಿ ಬೇಕೆನ್ನಿಸುವುದು ಒಂದು ಬಗೆಯ ಹಸಿವು, ಹುಡುಗಿ ಬೇಕೆನ್ನಿಸುವುದು ಇನ್ನೊಂದು ಬಗೆಯ ಹಸಿವು. ಅಷ್ಟೆ. ಅದಕ್ಕೆ ನಾಚಬೇಕಾಗಿಲ್ಲವಾದರೆ, ಇದಕ್ಕೂ ಇಲ್ಲ' ಎಂದು, ಅವನ ಕಡೆಯೇ ದುರುಗುಟ್ಟಿ ನೋಡುತ್ತಿದ್ದ ನನ್ನನ್ನು ಅಲ್ಲೇ ಬಿಟ್ಟುಬಿಟ್ಟು ಯಾವ ಬೇಟೆಗೊ, ಎಲ್ಲಿಗೋ ಹೊರಟುಹೋದ.

ಪಾಪದ ಹುಡುಗಿಯರು ಅವನಲ್ಲೇನು ಕಾಣುತ್ತಿದ್ದರೊ, ಅಂತೂ ಅವನ ಕಣ್ಣು ಬಿದ್ದ ಮಿಕ ಬಲೆಗೆ ಬೀಳದ್ದೇ ಇಲ್ಲ.

ಆ ಕಿರಿಸ್ತಾನರ ಹುಡುಗಿ, ಶೀಲಾನ ಕಥೆಯೂ ಹಾಗೇ ಆಯಿತು. ಆ ಹುಡುಗಿ ಇವನ ಬಲೆಗೆ ಬಿದ್ದದ್ದಷ್ಟೇ ಅಲ್ಲ, ಪೂರಾ ಮರುಳಾಗಿ ಹೋದಳು: ಇವನಿಲ್ಲದೆ ಬದುಕಲಾರೆನೆನ್ನುವಷ್ಟುಗೂ ಇವನಲ್ಲಿ ಅನುರಕ್ತಳಾದಳು. ಇವನು ಎರಡು ದಿನ ಕಣ್ಣು ಮರೆಯಾದರೆ, ಮೂರು ಕಾಗದ ಬರೆಯುತ್ತಿದ್ದಳು. ಒಂದೆರಡು ತಿಂಗಳ ಕಾಲ ಇವನ ಪ್ರಣಯ ವ್ಯಾಪಾರ ಹೀಗೇ ನಡೆಯಿತು.

ಒಂದು ದಿನ ಹೀಗೇ ಮಾತಿಗೆ ಮಾತು ಬಂದು, 'ಹೇಗಿದಾಳೆ ಶೀಲಾ' ಎಂದು ಕೇಳಿದೆ.

'ಹೇಗಿದಾಳೋ ನನಗೆ ಗೊತ್ತಿಲ್ಲ. ನಾನು ಅವಳನ್ನು ನೋಡಿಯೇ ಹತ್ತು ಹದಿನೈದು ದಿನವಾಗಿ ಹೋಯಿತು.'

'ಏಕೆ? ಇಷ್ಟು ಬೇಗ ಬೇಡವಾಗಿ ಹೋದಳೇ?'

'ಸರಿ. ಶುದ್ಧ ಸೆಂಟಿಮೆಂಟಲ್ ಸ್ಟಫ್. ಎರಡು ದಿನ ಹೋಗದಿದ್ದರೆ ಆ ಕಣ್ಣೀರೇನು, ಅಳುವೇನು. ಡ್ಯಾಮಿಟ್. ಜಿಗಣೆ ಹಿಂಡಿದ ಹಾಗೆ.'

'ಥೂ. ಪಾಪಿ ಜಿಗಣೆಯಂತೆ. ಪ್ರೀತಿಸಿ ಬಂದಾಕೆಯನ್ನು ನೀನು ತಾತ್ಸಾರ ಮಾಡಿದರೆ, ಆ ಹೆಣ್ಣು ಜೀವ ಕಣ್ಣೀರಿಡದೆ ಮತ್ತೇನು ಮಾಡಬೇಕು?'

'ಅದಕ್ಕೇ ನಾನು ಇದರಲ್ಲೆಲ್ಲಾ ನಿರ್ಲಿಪ್ತತೆ ಇರಬೇಕೂ ಅನ್ನೋದು. ಹಾಗೆ ಒಂದೊಂದು ಬಂಧ ನಾನೂ ಬಿಗಿದುಕೊಳ್ಳುತ್ತಾ ಹೋದರೆ, ಆಮೇಲೆ ಸರಪಳಿ ಹಾಕಿಕೊಳ್ಳಲು ಕಾಲು ಕೈಯಲ್ಲಿ ಜಾಗವೇ ಇರೋದಿಲ್ಲ. ಅದಕ್ಕೇ ಕಮಲಪತ್ರದ ಮೇಲಿನ ಜಲಬಿಂದು ಬಿದ್ದ ಹಾಗಿರಬೇಕು ಎಂತ ನಾ ಹೇಳುವುದು' ಎಂದು ನನ್ನನ್ನು, ಜಗತ್ತನ್ನೇ ಅಣಕಿಸುವನಂತೆ ನಕ್ಕು ಹೇಳಿದ.

ಅವನ ಮಾತು ಕೇಳಿ ನನಗೆ ಅಸಹ್ಯವಾಯಿತು. ಅವನಿಗೆ ಕಪಾಳಕ್ಕೆ ರಡು ಬಿಗಿದು ಓಡಿಹೋಗೋಣವೆನ್ನಿಸಿತು. ಆದರೂ ಹಾಗೆ ಮಾಡಲಾಗಲಿಲ್ಲ. ಅದೇ ಅವನಲ್ಲಿದ್ದ ಒಂದು ವಿಚಿತ್ರ ನೋಡಿ.

'ಇವನ್ನು ಓದಿ ನೋಡು' ಎಂದು ಒಂದು ಕಟ್ಟು ಮಸುಕಾದ ಪರಿಮಳ ಬರುತ್ತಿದ್ದ ಗುಲಾಬಿ ಬಣ್ಣದ ಕಾಗದಗಳ ಕಟ್ಟನ್ನು ಕೈಗಿಟ್ಟ.

'ಯಾರದು ಈ ಕಾಗದಗಳು?'

'ಅವಳದೇ.'

'ಅವಳದೇ ಎಂದರೆ ಹೇಗೆ ಅರ್ಥವಾಗಬೇಕು. ನಿನಗೆ ಎಷ್ಟು ಜನವೊ ಇಂಥ 'ಅವಳು' ಗಳು.

'ಶೀಲಾದು.'

'ಅವಳು ನಿನಗೆ ಬರೆದ ಕಾಗದ ನಾನೇಕೆ ಓದಲಿ?'

'ಹತ್. ಸೆಂಟಿಮೆಂಟಲ್ಲಾಗಬೇಡ. ಓದು. ಕಾಗದ ಓದಿದರೆ, ಅವಳ ಹತ್ತಿರ ಹೋದ ಹಾಗೇನೂ ಆಗೋದಿಲ್ಲ' ಎಂದ.

ಅವನ ಒತ್ತಾಯಕ್ಕೆ ಕಟ್ಟುಬಿದ್ದು ಕಾಗದಗಳನ್ನೆಲ್ಲಾ ಒಂದೊಂದಾಗಿ ತಿರುವಿಹಾಕಿದೆ. ಒಂದೊಂದು ಕಾಗದವೂ ನಿಟ್ಟುಸಿರು, ಅಗಲಿಕೆಯ ನೋವು, ನಿರಾಶೆಯ ಕಂಬನಿ, ಯಾತನೆಯ ಆರ್ತಧ್ವನಿ, ಯಾಚನೆಯ ದೀನವಾಣಿ, ಪ್ರಣಯದ ಹುಸಿ ಬೆದರಿಕೆ, ಹಸಿ ನೋವಿನ ತವರ್ಮನೆ. ಆ ಕಾಗದ ಓದಿ ಇವನು ಅವಳನ್ನು ಎಷ್ಟು ನಿರ್ದಯಿಯಾಗಿ ನಡಸಿಕೊಳ್ಳುತ್ತಿದಾನೆಂಬುದು ಸ್ಪಷ್ಟವಾಗಿತ್ತು. ಕೆಲವು ಕಡೆ ಕಣ್ಣು ತಾನೇ ತೇವವಾಯಿತು. ಕೊನೆಯ ಕಾಗದದಲ್ಲಿ 'ನೀನೂ ಹೀಗೇ ನನ್ನನ್ನು ಕೈಬಿಟ್ಟರೆ, ನಾನೆಲ್ಲಾದರೂ ಹೋಗಿ ಆತ್ಮಹತ್ಯಮಾಡಿಕೊಳ್ಳುತ್ತೇನೆ' ಎಂದು ಬರೆದಿದ್ದಳು. ಆ ಕಾಗದದ ತಾರೀಖು ನೋಡಿದೆ. ಎರಡೇ ದಿನದ ಹಿಂದೆ ಬಂದದ್ದು.

'ಹೋಗಿದ್ದೆಯಾ?' ಎಂದು ಕೇಳಿದೆ.

'ಊಹೂ' ಎಂದು ತಲೆಯಾಡಿಸಿದ.

'ಏಕೆ?' ತೀಕ್ಷ್ಣವಾಗಿ ಪ್ರಶ್ನೆ ಹಾಕಿದೆ.

'ಹೊಸ ಮಿಕಾ ಸಿಕ್ಕಿದೆ. ಈ ಹಳಸಿದ ಅನ್ನಕ್ಕೇಕೆ ಹೋಗಲಿ' ಎಂದ ನಿರ್ದಾಕ್ಷಿಣ್ಯವಾಗಿ.

'ಹಾಗಾದರಿವಳ ಗತಿ ಏನು ಮುಂದಕ್ಕೆ?'

'ಗತಿಯೇ?' ನನ್ನ ಕೈಲಿದ್ದ ಕಾಗದವನ್ನು ಇಸಿದುಕೊಂಡು, ಸಿಗರೇಟು ಹಚ್ಚಲು ಕೆರೆದ ಕಡ್ಡಿಯನ್ನು ಅದಕ್ಕೆ ತಗುಲಿಸಿದ. ಅದು ನಿಧಾನವಾಗಿ ಸುರುಳಿ ಸುತ್ತಿ, ಕರ್ರಗಾಗಿ ಉರಿಯಲಾರಂಭಿಸಿತು. 'ಇಷ್ಟೆ' ಎಂದ ತಾತ್ಸಾರವಾಗಿ ನಕ್ಕು.

'ಖಂಡಿತವಾಗಿಯೂ ನೀನು ಮಹಾ ಪಾಪಿ.

'ಅಷ್ಟೇ ತಾನೇ. ಪಾಪವಂತೆ ಪಾಪ? ಬೇಸರ ಬಂದ ಹೆಣ್ಣಿನ ಕೊರಳಿಗೇ ಜೋತುಬಿದ್ದು ಬಾಳುವ ಬೇಸರಕ್ಕಿಂತ ಇನ್ನು ಪಾಪವಿದೆಯೇ ಈ ಭೂಮಿಯ ಮೇಲೆ? ಪಾಪ! ಮುಡಿಯ ಮೇಲೆ ಬಾತಿತು ಎಂದು, ಬಾಡಿ ಒಣಗಿದ ಹೂವನ್ನೇ ಯಾರಾದರೂ ಮುಡಿಯುತ್ತಾರೆಯೇ? ಅಹಹ? ಏನು ತರ್ಕ!' ಎಂದು ತಿರಸ್ಕಾರವಾಗಿ ನಗುತ್ತ ಹೇಳಿದ ಸಿಗರೇಟಿನ ಹೊಗೆ ಸುರುಳಿಗಳನ್ನು ಬಾಯಿಂದ ಛಾವಣಿಗೆ ಹಾರಿಸುತ್ತಾ.

ಇಂಥವನ ಕೈಲಿ ಏನು ಮಾತಾಡಬೇಕು ಎಂದುಕೊಂಡು ನಾನೂ ಸುಮ್ಮಗಾಗಿ ಉಸಿರು ಉಳಿಸಿಕೊಂಡೆ.

ಇದಾದಮೇಲೆ ನಾಲ್ಕಾರು ದಿನ ನಾನು ಅವನನ್ನು ನೋಡಲಿಲ್ಲ; ನೋಡಲು ಆಗಲಿಲ್ಲ, ನೋಡುವ ಮನಸೂ ಇರಲಿಲ್ಲ. ಕಡೆಗೊಂದುದಿನ ಸಂಜೆ ಅವನೇ ಹುಡುಕಿಕೊಂಡು ಬಂದ 'ಹಲೋ' ಎನ್ನುತ್ತ.

'ಸೆನ್ಸೇಷನಲ್ ಸುದ್ದಿ. ಗೊತ್ತಾಯಿತೇನೋ?' ಎಂದು ಅವನೇ ಕೇಳಿದ. ನಾನವತ್ತು ಬೆಳಗಿನಿಂದ ಮನೆಬಿಟ್ಟು ಹೊರಟಿರಲಿಲ್ಲ. ಎಂತಲೇ ಯಾವ ಸುದ್ದಿಯೂ ಗೊತ್ತಿರಲಿಲ್ಲ. ಅಲ್ಲದೆ ಇವನ 'ಸೆನ್ಸೇಷನಲ್ ಸುದ್ದಿ' ಇನ್ನೇನು. ಮತ್ತಾವುದೋ 'ಮಿಕ'ದ ವಿಚಾರ ಇರಬೇಕೆಂದುಕೊಂಡು, ನಿರುತ್ಸಾಹಕತೆಯಿಂದಲೇ 'ಏನದು' ಎಂದೆ.

'ಹಾಗಾದರೆ ನಿನಗಿದು ಗೊತ್ತೇ ಇಲ್ಲ ಎನ್ನು?'

'ಊಹು. ಏನೂ ಗೊತ್ತಿಲ್ಲ. ಏನಾಯಿತು?'

'ಆಗೋದೇನು. ಶೀಲಾ ದೇಹ ಕೆರೇಲಿ ತೇಲ್ತಾ ಇತ್ತಂತೆ ಇವತ್ತು ಬೆಳಿಗ್ಗೆ. ಎರಡು ದಿನದಿಂದ ಪತ್ತೆ ಇರಲಿಲ್ಲ. ಬೆಳಿಗ್ಗೆ ಕೆರೆ ನೀರಿನಲ್ಲಿ ಕಾಣಿಸಿಕೊಂಡಳು' ಎಂದ ತಣ್ಣಗೆ.

ಆ ಸುದ್ದಿ ಕೇಳಿ ನನಗೆ ಸಿಡಿಲು ಹೊಡೆದ ಹಾಗಾಗಿ ಹೋಯಿತು. ಅವನ ಮಾತಿನ ರೀತಿ ಕೇಳಿ ಮೈ ಉರಿದುಕೊಂಡು ಬಂತು.

'ಇದು ಆತ್ಮಹತ್ಯವಲ್ಲ, ಕೊಲೆ. ಅವಳನ್ನು ಕೊಂದವನು ನೀನು ಎಂದೆ ಕಾವಾಗಿ.

'ಶಾಭಾಸ್ ಷೆರ್ಲಾಕ್ ಹೋಮ್ಸ್; ಹೂ ಮುಂದುವರಿಸು ನಿನ್ನ ಪತ್ತೇದಾರಿ ಕಥೇನ. ಯಾವಾಗ, ಎಲ್ಲಿ, ಹೇಗೆ ಶೀಲಾನ ಕೊಲೆ ಮಾಡಿದೆ ಎಂತಲೂ ಹೇಳಿಬಿಡು' ಎಂದ ವ್ಯಂಗ್ಯವಾಗಿ.

'ಕೈಯಾರೆ ನೀನು ಅವಳನ್ನು ಕೆರೆಗೆ ತಳ್ಳದೇ ಇರಬಹುದು. ಅರಿಯದ ಹುಡುಗಿಯನ್ನು ಪ್ರಣಯದಲ್ಲಿ ಸಿಲುಕಿಸಿ ನಡುನೀರಿನಲ್ಲಿ ಕೈಬಿಟ್ಟು ಕಡೆಗೆ ಅವಳು ಕೆರೆ ಪಾಲಾಗಲು ನೀನೇ ಕಾರಣ. ಇದರ ನೈತಿಕ ಜವಾಬುದಾರಿ ನಿನ್ನದೇ. ಅವಳ ಕೊಲೆಯ ಪಾಪ ನಿನ್ನದೇ. ನಿನ್ನಂಥ ಪಶುವಿನ ಕಾಮಕ್ಕೆ ಆ ಹುಡುಗಿ ತಿಳಿಯದೆ ಮೈಸೋಲದಿದ್ದರೆ, ಎಲ್ಲಾದರೂ ಸುಖಿಯಾ

ಗಿರುತ್ತಿದ್ದಳು. ಯಾರ ಮನೆಯನ್ನೋ ಬೆಳಗಿಸುವ ನಂದಾದೀಪವಾಗುತ್ತಿದ್ದಳು. ಮಕ್ಕಳ ತಾಯಾಗಿ, ಯಾವ ವಂಶವನ್ನೋ ಬೆಳೆಸುವ ಭಾಗ್ಯಲಕ್ಷ್ಮಿಯಾಗು ತ್ತಿದ್ದಳು. ಅರಳಿ ಹೂವಾಗಿ ಹಣ್ಣಾಗಬೇಕಾಗಿದ್ದ ಮೊಗ್ಗೆಯನ್ನು ನಿನ್ನ ಕ್ಷುದ್ರಕಾಮದ ಪಶುಪಾದದಡಿಯಲ್ಲಿ ಹಾಕಿಕೊಂಡು ಹೊಸಗಿ ಹಾಕಿಬಿಟ್ಟೆ. ನಾಚಿಕೆಯಾಗುವುದಿಲ್ಲವೇ ನಿನಗೆ' ಎಂದೆ ಉದ್ವೇಗವಲ್ಲಿ ಉಸಿರು ಕೂಡಾ ತಿರುಗಿಸಿಕೊಳ್ಳದೆ.

ನನ್ನ ರಭಸದ ಮಾತು ಕೇಳಿ ಅವನು ಎಳ್ಳಷ್ಟೂ ಕದಲಲಿಲ್ಲ. ಗಟ್ಟಿ ಯಾಗಿ ನಕ್ಕು ಚಪ್ಪಾಳೆ ತಟ್ಟಿ – 'ನೋಡು. ನಿನಗೆ ಒಳ್ಳೆ ಭಾಷಣಕಾರ ನಾಗುವ ಯೋಗ್ಯತೆ ಇದೆ. ಬೇಕೆಂದರೆ ಹೇಳು. ಕಬ್ಬನ್ ಪಾರ್ಕಿನ ಬ್ಯಾಂಡ್ ಸ್ಟಾಂಡಿನ ಹತ್ತಿರವೇ ಒಂದು ಭಾಷಣದ ವೇದಿಕೆ ಕಟ್ಟಿಸಿಕೊಡು ತ್ತೇನೆ. ಜಗದೋದ್ಧಾರನಾಗಬಹುದು' ಎಂದ.

ಇಂಥ ನಿರ್ಜೀವ, ಹೃದಯಹೀನ, ಭಾವನಾಶೂನ್ಯ ನರಪಿಶಾಚಿಗೆ ಏನು ಹೇಳಬೇಕು ?

ಅವನ ಕೈಲಿ ಮಾತು ಕೂಡಾ ಆಡಲಾರದೆ ನಾನೇ ರೋಸಿ ಸುಮ್ಮ ನಾದೆ ; ಮತ್ತವನ ಕೈಲಿ ಮಾತಾಡಲಿಲ್ಲ' ಸ್ವಲ್ಪ ಹೊತ್ತು ಸುಮ್ಮನೆ ಸಿಗರೇಟು ಸೇದುತ್ತ ಕುಳಿತಿದ್ದು ಹೊರಟುಹೋದ.

ಇದಾದಮೇಲೆ ನನಗೆ ಅವನನ್ನು ನೋಡಲು ಮನಸು ಬರಲಿಲ್ಲ. ಒಂದು ವಾರವಾಗುವ ಹೊತ್ತಿಗೆ, ಕೆಲವು ಕಾಲ ಊರು ಬಿಟ್ಟುಹೋಗಬೇಕಾಗಿ ಬಂತು – ಮಲಬಾರಿಗೆ ; ಕನ್ನಾನೂರಿನಲ್ಲಿದ್ದ ನನ್ನ ತಂಗಿಯನ್ನು ನೋಡಿ ಕೊಂಡು ಬರಲು.

ತೀರಾ ಹೋಗುವ ಮುನ್ನ, ಹೇಗಿದ್ದರೂ, ಮತ್ತೆ ನೋಡಲು ಒಂದೆರಡು ತಿಂಗಳಾಗುತ್ತದಲ್ಲಾ ಹೇಳಿ ಹೋಗೋಣವೆಂದು ಹೋದೆ. ಆ ಮಾತು, ಈ ಮಾತುಗಳ ಬಾಯುಪಚಾರವಾದಮೇಲೆ, ಹೋದ ವಿಚಾರ ತಿಳಿಸಿದೆ.

'ಎಲ್ಲಿಗೆ ಹೋಗುತ್ತೀಯ ?' ಎಂದ.

'ಮಲಬಾರಿಗೆ.'

'ಒಳ್ಳೆ ಕೆಲಸವನ್ನೇ ಮಾಡುತ್ತಿದೀಯ.'

'ಏಕೆ ?'

‘ ಒಂದು ಬುದ್ಧಿವಾದದ ಮಾತು ಹೇಳಿದರೆ ಕೇಳುತ್ತೀಯಾ ?’

‘ ಏನದು ಹೇಳು. ಕೇಳಬಹುದಾದುದಂಥದಾದರೆ ಕೇಳುತ್ತೇನೆ.”

‘ ಮತ್ತೇನೂ ಇಲ್ಲ. ಹೇಗಿದ್ದರೂ ಅನಾಯಾಸವಾಗಿ ಮಲಬಾರಿಗೆ ಹೋಗುತ್ತಿದೀಯ. ಮಲಬಾರಿನ ಹುಡುಗಿಯರು, ತುಂಬಾ ಚೆಲುವೆಯರಂತೆ; ಸುಲಭಸಾಧ್ಯರಂತೆ. ಒಂದೆರಡನ್ನಾದರೂ ರುಚಿ ನೋಡದೆ ಬರಬೇಡ, ಮುಠ್ಠಾಳನ ಹಾಗೆ’ ಎಂಧ ನಗುತ್ತ.

ಅವನ ಮಾತಿಗೆ ಏನೂ ಉತ್ತರ ಹೇಳದೆ, ಮತ್ತೇನು ಮಾತೂ ಆಡದೆ ವೇಗವಾಗಿ ಹೊರಟುಹೋದೆ. ಬೆನ್ನ ಹಿಂದೆ ಅವನು ಗಟ್ಟಿಯಾಗಿ ನಕ್ಕದ್ದು ಕೇಳಿಸಿತು.

*     *     *     *

ಆಗ ಊರು ಬಿಟ್ಟು ಹೋದವನು, ಮತ್ತೆ ಹಿಂತಿರುಗಿ ಬರಲು ಎರಡು ತಿಂಗಳಾಯಿತು.

ಊರಿಗೆ ಹಿಂದಿರುಗುತ್ತಿದ್ದ ಹಾಗೇ ಗೊತ್ತಾದ ವಿಶೇಷ ಸುದ್ದಿ ಅವನಲ್ಲಾದ ಅದ್ಭುತ ಪರಿವರ್ತನೆ. ಇದನ್ನು ಕೇಳಿ ನನ್ನ ಕುತೂಹಲ ಕೆರಳಿತು.

ಇದು ಗೊತ್ತಾದ ಮೇಲೆ, ಅವನನ್ನು ನೋಡಿ ಮಾತಾಡಿಸಿ ಬರಬೇಕೆಂದುಕೊಂಡು, ಒಂದೆರಡು ಮೂರು ಸಲ ಅವನ ಮನೆಗೇ ಹುಡುಕಿಕೊಂಡು ಹೋದೆ. ಸಿಗಲಿಲ್ಲ. ನಿರಾಶನಾಗಿ ವಾಪಸು ಬಂದೆ.

ಹೀಗಾಗಿ ಪೂರಾ ಒಂದು ವಾರ ಅವನ ದರ್ಶನವಾಗಲಿಲ್ಲ.

ಕಡೆಗೊಂದು ದಿನ ಮಧ್ಯಾಹ್ನ ಅವನ ಮನೆಯ ಆಳುಮಗ ಒಂದು ಕಾಗದ ತಂದು ಕೊಟ್ಟ. ಅದರಲ್ಲಿ ಹೆಚ್ಚೇನೂ ಬರೆದಿರಲಿಲ್ಲ. ‘ ನೀನು ಊರಿಗೆ ಹಿಂದುರಿಗಿದ ವಿಚಾರ ಗೊತ್ತಾಯಿತು. ನೋಡಲಾಗಲಿಲ್ಲ. ಇವತ್ತು ಸಂಜೆಗೆ ಬಾ. ಮಾತಾಡಬೇಕಾದುದು ಎಷ್ಟೋ ಇದೆ’ ಇಷ್ಟೇ ಅದರಲ್ಲಿದ್ದುದು. ಕಾಗದದ ಭಾವ ಇಷ್ಟೇ ಆದರೂ, ಆ ಪುಟ್ಟ ಕಾಗದದಲ್ಲೂ ಏನೋ ಒಂದು ಬಗೆಯ ಪರಿವರ್ತನೆ ಕಾಣುತ್ತಿತ್ತು ; ಅವ್ಯಕ್ತ ಸೌಜನ್ಯವಿತ್ತು. ‘ ಖಂಡಿತ ಬರುತ್ತೇನೆ’ ಎಂದು ಹೇಳಿ ಕಳಿಸಿದೆ. ಆ ಕಾಗದವನ್ನು ಓದಿದಾಗಲಿಂದ, ಅವನನ್ನು ಯಾವಾಗ ನೋಡೇನೋ ಎಂಬ ಕಾತುರತೆ ಅಕಾರಣವಾಗಿ

ಸನ್ನಿದಿಯಲ್ಲಿ ಬೆಳೆಯುತೊಡಗಿತು; ಸಂಜೆ ಸನಿಹವಾದ ಹಾಗೆ ಹೆಚ್ಚಾಗ ತೊಡಗಿತು.

ಪಡುವಲ ದಿಕ್ಕಿನ ಕೆಂಪ ವಾಗಿ, ಬಂಗಾರವಾಗುತ್ತಿದ್ದ ಹಾಗೇ ಕೋಟು ತಗುಲಿಸಿಕೊಂಡು, ಅವನ ಮನೆಯ ಕಡೆ ಹೊರಟೆ. ಅವನೂ ನನಗಾಗೇ ಕಾಯುತ್ತಿದ್ದ. ನನ್ನನ್ನು ಕಂಡ ಕೂಡಲೇ 'ಓ! ಬಂದೆಯಾ?' ಎಂದು ತೃಪ್ತಿಯ ಕಿರುನಗೆ ನಕ್ಕ. ಅವನ ಮುಖ ನೋಡಿದೆ. ಹಿಂದೆಂದೂ ಕಾಣದ ಒಂದು ಬಗೆಯ ಕೋಮಲತೆ, ಗಾಂಭೀರ್ಯವಿತ್ತು; ಹೆಚ್ಚು ಮಾನವೀಯ ವಾಗಿ ಕಂಡಿತು ಅವನ ಮುಖ.

'ಅವತ್ತು ಸಿಟ್ಟುಮಾಡಿಕೊಂಡು ಹೋಗಿದ್ದೆ. ಬರುತ್ತೀಯೋ ಇಲ್ಲವೊ ಎಂದಿದ್ದೆ. ಅಂತೂ ಬಂದೆಯಲ್ಲಾ. ನಡಿ. ಹಾಗೇ ಪಾರ್ಕಿನ ಕಡೆ ಹೋಗಿ ಸುತ್ತಾಡಿಕೊಂಡು ಬರೋಣ' ಎಂದ. ಅವನ ಧ್ವನಿಯಲ್ಲೂ ಯಾವುದೋ ಅಸ್ಪಷ್ಟ ಯಾತನೆಯ ಮಿಡುಕತನವಿತ್ತು. 'ಸರಿ. ಹೋಗೋಣ' ಎಂದೆ.

ಇಬ್ಬರೂ ಪಾರ್ಕಿನತ್ತ ಹೆಜ್ಜೆ ಹಾಕಿದೆವು. ದಾರಿಯಲ್ಲಿ ಹೆಚ್ಚು ಏನೂ ಮಾತಾಡಲಿಲ್ಲ. ಅವನಂತೂ ತಲೆ ತಗ್ಗಿಸಿಕೊಂಡು ನಡೆಯುತ್ತಿದ್ದ. ಹದಿನೈದು ಇಪ್ಪತ್ತು ನಿಮಿಷವೆನ್ನುವುದರೊಳಗಾಗಿ ಪಾರ್ಕು ಸಿಕ್ಕಿತು. ಹೆಚ್ಚು ಜನ ಸುಳಿಯದ ಮೂಲೆಯೊಂದನ್ನು ಹುಡುಕಿಕೊಂಡು ಹೋಗಿ ಕೂತು ಕೊಂಡೆವು. ಅವನು ಅಂಗಾತವಾಗಿ ಮಲಗಿ, ಹುಲ್ಲೆಸಳೊಂದನ್ನು ಕಡಿಯುತ್ತಾ ಮಲಗಿಕೊಂಡ. ಏನೂ ಮಾತಾಡಲಿಲ್ಲ. ಎಂದೂ ಇಲ್ಲದ ಗಾಂಭೀರ್ಯ ಅಂದು ಅವನನ್ನು ಆವರಿಸಿತ್ತು. ಮಾತು ಹೇಗೆ, ಎಲ್ಲಿಂದ ಆರಂಭಿಸಬೇಕೆಂದು ತಿಳಿಯದೆ ನಾನೂ ಮೌನವಾಗಿ ಕೂತಿದ್ದೆ. ನನಗೇನೋ ಅವನ ಮೌನದ ಆಳವರಿಯದ ಗರ್ಭದಲ್ಲೆಲ್ಲೋ ಕಣ್ಣೀರು ಪಣ್ಣಾಗುತ್ತಿರುವುದೆಂದೇ ಅನಿಸುತ್ತಿತ್ತು – ಅಕಾರಣವಾಗಿ. ಸ್ವಲ್ಪ ಹೊತ್ತು ಹಾಗೇ ಇದ್ದೆವು.

ಇದಿರುಗಡೆ ಯಾರೋ ಒಬ್ಬ ಸಾರಸ್ವತರ ಹುಡುಗಿ ಹಾದುಹೋದಳು. ಒಳ್ಳೆ ಚೆಲುವೆ. ಯಾರೂ ಮತ್ತೊಮ್ಮೆ ನೋಡಬೇಕು ಎನ್ನಿಸುವಂಥವಳು. ಅವಳನ್ನು ನೋಡಿ, ಅವನನ್ನು ತಿವಿದೆ. 'ನೋಡೋ ಹೇಗಿದಾಳೆ' ಎಂದೆ. ಅವನು ಅವಳ ಕಡೆ ತಿರುಗಿ ಕೂಡಾ ನೋಡದೆ 'ಇರಲಿಬಿಡು. ಯಾರ ಮುಡಿಯ ಮಲ್ಲಿಗೆಯೊ. ನಮ್ಮ ಕಣ್ಣು ಬಿದ್ದೇಕೆ ನಲುಗಬೇಕು' ಎಂದ.

ಅವನ ಮಾತು ಕೇಳಿ ನನಗೆ ಅಚ್ಚರಿಯಾಯಿತು. ಹೆಣ್ಣಿನ ನೆರಳನ್ನೂ ದೃಷ್ಟಿಸದೆ ಬಿಡದಿದ್ದ ಅವನ ಬಾಯಿಂದ ಈ ಮಾತು. ಆ ಮಾತಿನಲ್ಲಿ ಕೃತ್ರಿಮವೇನೂ ಇರಲಿಲ್ಲ. ಹೃದಯದಾಳದಿಂದ ತಾನೇತಾನಾಗಿ ಬಂದ ಮಾತು ಅವು. ತಟಕ್ಕನೆ ಅವನ ಕಡೆ ತಿರುಗಿ ನೋಡಿದೆ. ಸಂಜೆಯ ಕೇಸರಿ ಬಂಗಾರದ ಬೆಳಕು ಅವನ ಮುಖದ ಮೇಲೆ ಬಿದ್ದು, ಅವನ ಕಣ್ಣಂಚಿನಲ್ಲಿ ಇಣುಕುತಿದ್ದ ಕಂಬನಿ ಹೊಳೆಯುತ್ತಿತ್ತು.

'ಈ ವೇದಾಂತ ಎಂದಿನಿಂದ' ಎಂದು ಹಾಸ್ಯಮಾಡುವನಂತೆ ಕೇಳಿದೆ.

'ಲಲಿತಾ ಹೋದಂದಿನಿಂದ' ಎಂದು ಅಪ್ರಯತ್ನವಾಗಿಯೇ, ಅವನಿಂದ ಉತ್ತರ ಬಂತು. ದುಃಖದ ವೀಣೆಯನ್ನು ಯಾತನೆಯ ಬೆರಳು ಮಿಡಿದಾಗ ಪಲುಕುವಂಥ ಸ್ವರ ಅದು. ಅದನ್ನು ಕೇಳಿ ನಾನು ಅಪ್ರತಿಭನಾದೆ. ಯಾರು ಈ ಲಲಿತಾ? ಈ ಬೆಂಕಿಯೊಡನಾಡಿ. ಪ್ರಾಣ ನೀಡಾಡಿದ ಪತಂಗ ಇನ್ನೊಬ್ಬಳೆ? ಇವಳಾರು?

'ಲಲಿತಾ .... ಯಾರು?'

'ನನ್ನ ಸೋದರಮಾವನ ಮಗಳು ಹೊರಟುಹೋದಳು .... ಇರಲಾರದೆ ಬಾಡಿ ಹೋಯಿತು ಆ ಹೂವು .... ನಾನೇ ಕೈಯಾರ ನನ್ನ ಕಾಮದ ಬೆಂಕಿ ಇಟ್ಟುಬಿಟ್ಟೆ ಆ ಹೂವಿಗೆ.'

ಬೆನ್ನು ಮೇಲಾಗಿ ಮಲಗಿ, ತೋಳಲ್ಲಿ ಮುಖ ಮರೆಸಿಕೊಂಡು ಅಳಲಾರಂಭಿಸಿದ. ಉಕ್ಕಿ ಉಕ್ಕಿ ಬರುತ್ತಿತ್ತು ಆ ದುಃಖ. ನನಗೆ ಏನೂ ಹೇಳಲು ತೋಚಲಿಲ್ಲ. ಆದರೂ ಅವನ ಒಂದೊಂದು ಬಿಕ್ಕು, ನನ್ನೆದೆಯಲ್ಲಿ ಮಾರ್ದನಿಗೊಡುತ್ತಿತ್ತು. ಪ್ರತ್ಯಕ್ಷ ದುಃಖದ ಇದಿರು ಮಾತು ತಲೆ ಎತ್ತೀತೇ? ಸುಮ್ಮನೆ ಅವನ ಬೆನ್ನು ನೇವರಿಸಿದೆ. ನನ್ನ ಹಸ್ತಸ್ಪರ್ಶಕ್ಕೆಂಬಂತೆ, ಸ್ವಲ್ಪ ಹೊತ್ತಿನ ನಂತರ ಅವನ ದುಃಖ ಶಮನವಾಯಿತು.

'ಈ ನಾಚಿಕೆಗೇಡಿನ ಕಥೆ ಹೇಳಲೆಂದೇ ನಿನ್ನನ್ನು ಬಾ ಎಂದದ್ದು .... ಈ ಪಾಪವನ್ನು ಯಾರ ಮುಂದಾದರೂ ತೋಡಿಕೊಳ್ಳದಿದ್ದರೆ, ಈ ಬೆಂಕಿಯಲ್ಲಿ ನಾನು ಸುಟ್ಟು ಹೋಗುತ್ತೇನೆ; ಬದುಕಲಾರೆ. ಯಾರ ಮುಂದೆ ಹೇಳಿಕೊಳ್ಳಲಿ. ನನ್ನ ನೆತ್ತರೊಳಗೆ ಬೆರೆತುಹೋಗಿದೆ ಈ ಬೆಂಕಿ .......'

ಅವನ ಮಾತಿಗೆ ನಾನೇನು ಉತ್ತರ ಹೇಳಲಿ. ಅವನು ಒಳಗೇ ದಗ್ಧನಾಗುತ್ತಿರುವುದು, ಅವನ ಒಂದೊಂದು ಮಾತಿನಲ್ಲೂ ಎದ್ದು ಕಾಣುತ್ತಿತ್ತು.

'ಲಲಿತಾನ ನೀನು ನೋಡಿದ್ದೆಯಾ ?'

'ಇಲ್ಲ ........'

'ಸರಿಯೇ. ಚಿಕ್ಕವಳಾಗಿದ್ದಾಗ ಮಾತ್ರ ಒಂದು ಸಲ ಬಂದಿದ್ದಳು. ಆಗ ನೀನು ಅವಳನ್ನು ನೋಡಿದ್ದೆಯೋ ಇಲ್ಲವೊ. ನೋಡಿದ್ದರೂ ನೆನಪು ಇರಲಿಕ್ಕಿಲ್ಲ. ನನಗೇ ಇರಲಿಲ್ಲ.'

ಆಗ ಅವಳನ್ನು ನನಗೆ ಕೊಟ್ಟು ಮದುವೆ ಮಾಡಬೇಕೆಂದು ಬಂದಿದ್ದರು ನನ್ನ ಸೋದರ ಮಾವ. ಅಮ್ಮ ಅಪ್ಪ ಇಬ್ಬರೂ ಒಪ್ಪಿದ್ದರು. ನಾನೇ ಬೇಡವೆಂದೆ. ಅವಳಂಥ ಹಳ್ಳಿಯ ಗಮಾರಳನ್ನು ಕಟ್ಟಿಕೊಳ್ಳುವುದು ನನಗೆ ಬೇಕಾಗಿರಲಿಲ್ಲ. ನಿರ್ಧಾರವಾಗಿ, ಕೂಡದು ಎಂದು ಬಿಟ್ಟೆ. ಅಮ್ಮ ಅಪ್ಪ ಎಷ್ಟೋ ಬುದ್ಧಿ ಹೇಳಿದರೂ ಕೇಳಲಿಲ್ಲ. ಕಡೆಗೆ ಸೋದರಮಾವ ಕಣ್ಣು ಒರೆಸಿಕೊಂಡು ಹೊರಟುಹೋದರು. ಅವರಿಗೆ ತಮ್ಮ ಒಬ್ಬಳೇ ಮಗಳ ಮೇಲೆಷ್ಟು ಪ್ರೀತಿ ಇತ್ತೋ, ಅಷ್ಟೇ ನನ್ನ ಮೇಲೂ ಇತ್ತು. ತನ್ನ ಅಕ್ಕನ ಮಗನಿಗೆ, ತನ್ನ ಮಗಳನ್ನು ಕೊಟ್ಟು ಮದುವೆ ಮಾಡಬೇಕೆಂದು ಎಷ್ಟೋ ಆಸೆ ಇಟ್ಟುಕೊಂಡಿದ್ದರು. ಆದರೂ ನನ್ನ ಕಲ್ಲಿನೆದೆಗೆ ಅವರ ಯಾವ ಮಾತೂ ನಾಟಲಿಲ್ಲ; ಹಿಡಿದ ಹಟ ಬದಲಿಸಲಿಲ್ಲ. ಮತ್ತೇನೂ ಮಾಡಲು ತೋಚದೆ, ಕಣ್ಣೀರು ಹಾಕಿ ಹೊರಟುಹೋದರು.

ಮರು ವರ್ಷವೇ ಲಲಿತಾನ ಮದುವೆಯಾಗಿ ಹೋಯಿತು. ನನಗೆ ಅವಳ ನೆನಪೂ ಮರೆಯುತ್ತಾ ಬಂತು.

ಎಷ್ಟೋ ವೇಳೆ ವಿಧಿ ನಮ್ಮ ಕೈಲಿ ಇಂಥ ಕಣ್ಣುಮುಚ್ಚಾಲೆಯಾಡುತ್ತದೆ; ಕಣ್ಣು ಮುಚ್ಚಿ ದುರಂತ ನಾಟಕ ಆಡುತ್ತದೆ ನಮ್ಮ ಬಾಳಿನಲ್ಲಿ. ಮುಂದೆ ಒಂದು ಕಾಲಕ್ಕೆ ನಾವು ಬೇಕು ಎನ್ನಬಹುದಾದುದನ್ನು, ಆ ಬಯಕೆ ಮಾಡುವ ಎಷ್ಟೋ ಮೊದಲು ನಮಗೆ ತಂದುಕೊಡುತ್ತದೆ. ಭವಿಷ್ಯತ್ತನ್ನು ಕಾಣಲಾಗದ ಕಣ್ಣಿನಿಂದ ನಾವು ಅದನ್ನು ಕುರುಡಾಗಿ ಕಾಲಿನಿಂದ ಒದ್ದು ಬಿಡುತ್ತೇವೆ. ಅಂದೇ ವಿಧಿ ಸಂಜು ನಗೆ ನಕ್ಕು, ದುರಂತ ನಾಟಕಕ್ಕೆ ನಾಂದಿ ಹಾಡಿ, ಎಲ್ಲೋ ತಲೆ ಮರೆಸಿಕೊಳ್ಳುತ್ತದೆ — ಅಣಕಿಸಿ ವ್ಯಂಗ್ಯವಾಗಿ

ನಗುವ ಕಾಲ ಎಂದು ಬಂದೀತೋ ಎಂದು ಕಾಯುತ್ತಾ, ನಾವೂ ಈ ಅದೃಷ್ಟದ ತೆರೆಗಳ ಮೇಲೆ ಹೊಯ್ದಾಡಿ ಕುಣಿದು ಕುಪ್ಪಳಿಸುತ್ತೇವೆ. ನೊರೆ ಬುರುಗಿನ ವಜ್ರದ ಹನಿಗಳನ್ನು ತೂರಾಡುತ್ತೇವೆ. ದಿಗಂತರೇಖೆ ಕಪ್ಪಾಗುತ್ತಿರುವುದು, ಆ ಗಳಿಗೆ ಬಣ್ಣಬಣ್ಣದ ಇಂದ್ರಜಾಲದಲ್ಲಿ ಮೈಮರೆತ ನಮಗೆ ಕಾಣಿಸುವುದಿಲ್ಲ: ಆದರೆ ಎಚ್ಚರವಾಗಬೇಕಾದ ಹೊತ್ತು ಬರುತ್ತದೆ. ವಿಧಿ ಆಗ ನಮ್ಮನ್ನು ಎಚ್ಚರಿಸುತ್ತಾನೆ; ಮೆತ್ತಗೆ ತಟ್ಟಿಯಲ್ಲ, ಸಿಡಿಲಿನ ಚಾಟಿಯಿಂದ ಜಡಿದು. ಕಣ್ಣು ತೆರೆದು ನೋಡುತ್ತೇವೆ. ಯಾವುದೋ ಬೇಕೆಂದು ಬಯಸಿದ ವಸ್ತುವನ್ನು ಕಣ್ಣಿದುರಿಗಿಡುತ್ತಾನೆ ವಿಧಿ. ಹಿಡಿಯಲು ಹೋದಾಗ, ಆ ಬಯಸಿದ ವಸ್ತು, ಸ್ಪರ್ಶಕ್ಕೆ ಬೆದರಿ ಕಡಲಿನೊಳಗಡಗಿ ಹೋಗುತ್ತದೆ. ಹುಚ್ಚಾಗಿ ಹಾರಾಡುತ್ತೇವೆ ತೆರೆಯಮೇಲೆ, ಬಯಸಿದ್ದನ್ನು ಕಳೆದುಕೊಂಡು. ವಿಧಿ ಅಣಕಿಸಿ ಘಟ್ಟಿಸಿಘಟ್ಟಿಸಿ ನಗುತ್ತಾನೆ –

"ನನ್ನ ಬಾಳಿನಲ್ಲೂ ಹೀಗೇ ಆಯಿತು...." ಎಂದು ಅವನು ತನ್ನ ಎದೆಯೊಳಗಿನ ಉರಿಯಲ್ಲಿ ತಪ್ತವಾದ ನಿಟ್ಟುಸಿರು ಬಿಟ್ಟ.

ಅವನ ಮಾತೆಲ್ಲಾ ನನಗೆ ಕಣ್ಣು ಮುಚ್ಚಿ ಕಾಡಿನೊಳಗೆ ನಡೆಸಿದಂತಿತ್ತು. ಯಾವುದೂ ಅರ್ಥವಾಗಲಿಲ್ಲ. ಹಾಗೆಂದು ತಲೆಯಾಡಿಸುತ್ತ ಹೇಳಿದೆ.

"ಹೂ .... ಪೂರಾ ಕಥೆ ಕೇಳು. ಅರ್ಥವಾಗುತ್ತದೆ" ಎಂದು ಹೇಳಿ ಅವನು ತನ್ನ ಕಥೆ ಮುಂದುವರಿಸಿದ. ಮೌನವಾಗಿ ಕೇಳುತ್ತಾ ಕೂತೆ.

"ನೀನು ನಿನ್ನ ತಂಗಿಯನ್ನು ನೋಡಲೆಂದು ಮಲಬಾರಿಗೆ ಹೋದಮೇಲೆ ನಾನು ಯಾವುದೋ ಕೆಲಸದಮೇಲೆ ನನ್ನ ಸೋದರಮಾವನ ಊರಿಗೆ ಹೋಗಬೇಕಾಗಿ ಬಂತು.

"ಒಂದು ದಿನ ಬೆಳಿಗ್ಗೆ ಮೋಟಾರಿನಲ್ಲಿ ಹೊರಟು ಸಂಜೆಗೆ ಅವರ ಊರು ಸೇರಿದೆ. ನಾನು ಬರುತ್ತೇನೆಂದು ಮೊದಲೇ ಕಾಗದ ಬರೆದದ್ದರಿಂದ ಸೋದರಮಾವ ತಾವೇ ನಿಲ್ದಾಣಕ್ಕೆ ಬಂದಿದ್ದರು. ಆ ಮಾತು ಈ ಮಾತು ಆಡುತ್ತ ಮನೆಗೆ ಸೇರುವ ಹೊತ್ತಿಗೆ ರಾತ್ರಿ ಎಂಟು, ಎಂಟೂವರೆ ಗಂಟೆಯ ಸಮಯವಾಗಿತ್ತು. ಯಾರೋ ಇದುರಿಗೆ ಸಿಕ್ಕ ಪರಿಚಯದವರೊಡನೆ ಸ್ವಲ್ಪ ಹೊತ್ತು ಮಾತಾಡುತ್ತಿದ್ದ. ಹತ್ತು ನಿಮಿಷ ಆಗಿರಬಹುದು.

ದೊಳಗೆ ಒಳಗೆ ಹೋಗಿದ್ದ ಸೋದರಮಾವ ಹೊರಗೆ ಬಂದು ‘ಏಳು. ಕಾಲು ತೊಳೆದುಕೊ ಬಾ. ಊಟಮಾಡಿ ಮಲಗುವಿಯಂತೆ. ಮೋಟಾರಿನಲ್ಲಿ ಇಡೀ ದಿನ ಬಂದು ಆಯಾಸಪಟ್ಟಿದ್ದೀಯ ಬೆಳಿಗ್ಗೆ ಮಾತಾಡಿದರಾಗುತ್ತದೆ’ ಎಂದರು. ನನ್ನ ಸ್ಥಿತಿಯೂ ಹಾಗೇ ಇತ್ತು. ಒಳಗೆ ಹೋಗಿ, ಕೋಟು ತೆಗೆದು, ಹೆಗಲ ಮೇಲೆ ಟವಲು ಹಾಕಿಕೊಂಡು, ಕಾಲು ತೊಳೆದುಕೊಳ್ಳಲು ಬಚ್ಚಲುಮನೆಗೆ ಹೋದೆ.

“ನಮ್ಮ ಹಳ್ಳಿ ಮನೆಗಳ ಬಚ್ಚಲು ಮನೆ ನೋಡಿದ್ದೀಯಲ್ಲ — ಹಗಲು ಹೊತ್ತಿನಲ್ಲೆ ದೀಪ ಹಚ್ಚಬೇಕು. ಆಗಲೂ ಒಂದು ಸಣ್ಣ ಪ್ರಣತಿ ಹೊತ್ತಿಸಿಟ್ಟಿದ್ದರು. ಅದರ ಮಂಕಾದ ಬೆಳಕಿನಲ್ಲೇ ಒಳಗೆ ಹೋದೆ. ಬಚ್ಚಲುಮನೆಯೊಳಗೆ ಯಾರೋ ಇದ್ದರು. ನಾನು ಹೋದಕೂಡಲೇ ‘ತೆಗೆದುಕೊಳ್ಳಿ ನೀರು’ ಎಂದು ನೀರಿನ ತಂಬಿಗೆಯನ್ನು ಕೈಗೆ ಅಂದಿಸಿದರು. ನೀರು ಕೊಟ್ಟವರ ಮುಖ ದಿಟ್ಟಿಸಿ ನೋಡಿದೆ. ಆ ಮಂಕು ಬೆಳಕಿನಲ್ಲಿ ಯಾರೆಂದು ಸ್ಪಷ್ಟವಾಗಿ ಗೊತ್ತಾಗದಿದ್ದರೂ, ತಗ್ಗಿಸಿದ ಆ ಮುಖ ಸುಂದರವಾದುದೆಂಬುದು ಕುರುಡನಿಗೂ ಕಾಣುವಂತಿತ್ತು. ಓ! ಎಷ್ಟು ಚೆಲುವಾದ ಮುಖ. ನೀರು ಕೊಟ್ಟವಳೇ ಆಕೆ ಒಳಗೆ ಹೊರಟುಹೋದಳು. ಎಂಥ ಸೊಗಸಾದ ನಡಗೆ. ಯಾರೋ ಗೊತ್ತಾಗಲಿಲ್ಲ. ಅವಸರದಲ್ಲಿ ಯೋಚಿಸಿದೆ. ಹೊಳೆಯಲಿಲ್ಲ. ಮೂರು ವರ್ಷದ ಕೆಳಗೆ ನಮ್ಮ ಸೋದರತ್ತೆ ತೀರಿಕೊಂಡದ್ದು ಗೊತ್ತಿತ್ತು. ಬಹುಶಃ ಸೋದರಮಾವ ಎರಡನೆ ಮದುವೆ ಮಾಡಿಕೊಂಡಿರಬೇಕು. [illegible] ಇಲ್ಲ. ಘಾಟಿ, ಯಾರಿಗೂ ತಿಳಿಸದೆ, ಸೊಗಸಾದ ಹುಡುಗಿಯನ್ನು ಆರಿಸಿ ಹೊಡೆದಿದಾನೆ ಭಾಗ್ಯವಂತ, ಎಂದುಕೊಳ್ಳುತ್ತಾ ಕಾಲು ಮುಖ ತೊಳೆದುಕೊಂಡು ಊಟದ ಮನೆಗೆ ಬಂದೆ.

“ನಾನು ಬರುವುದರೊಳಗಾಗೇ ಎಲೆ ಹಾಕಿ ಸಿದ್ಧವಾಗಿತ್ತು. ಸೋದರಮಾವ ನನ್ನನ್ನೇ ಕಾಯುತ್ತಾ ಕೂತಿದ್ದರು. ಕೂತಕೂಡಲೇ ಒಂದೊಂದಾಗಿ ಅಡಿಗೆ ಎಲೆಯಮೇಲೆ ಬರಲಾರಂಭಿಸಿತು. ನಾನು ಬಚ್ಚಲು ಮನೆಯಲ್ಲಿ ಕಂಡ ಚೆಲುವೆಯೇ ಬಡಿಸುತ್ತಿದ್ದಳು. ಬೆಳಕಿನಲ್ಲಿ, ಬಚ್ಚಲಿನಲ್ಲಿ ಕಂಡದ್ದಕ್ಕಿಂತ ಚೆಲುವಾ.. ಕಂಡಳು. ಬಡಿಸಲು ಬಾಗಿದಾಗ ಮುಖ ನೋಡಿ ತಲೆ ತಗ್ಗಿಸಿಕೊಂಡೆ. ಪಕ್ಕದಲ್ಲಿ ಕೂತ ಸೋದರಮಾವ ನಾನು ಸುಮ್ಮನಿದ್ದು

ದನ್ನು ಕಂಡು 'ಯಾಕೋ ಹೀಗೆ ನೋಡುತಾ ಇದೀಯಾ. ಗುರುತು ಸಿಗಲಿಲ್ಲವೇ ?' ಎಂದರು. ಎಂದಾದರೂ ನೋಡಿದ್ದರೆ ತಾನೇ ಇಂದು ಗುರುತು ಸಿಗುವುದು. ಆದರೂ ಅವರು ಆ ಮಾತು ಹೇಳಿದ ಕೂಡಲೇ ಆ ಮುಖವನ್ನೆಲ್ಲೋ ನೋಡಿದ್ದಹಾಗೇ ಎನಿಸತೊಡಗಿತು. ಆದರೂ ಸ್ಪಷ್ಟವಾಗಿ ನೆನಪಿಗೆ ಬರದು. 'ಏನೋ ನೆನಪಿಲ್ಲ' ಎಂದು ತಲೆಯಾಡಿಸಿದೆ.

"ಬಡವರ ನೆನಪು ಹೇಗಿರುತ್ತೆ" ಎಂದಳು ಆಕೆ. ಆಕೆಯ ಮಾತು ಬಿಗಿಯಾಗಿ ಬಂದರೂ, ಅವರ ಒಡಲಲ್ಲೆಲ್ಲೋ ನಗೆ ಕುಲುಕುತ್ತಿತ್ತು. ಎಷ್ಟು ಕೋಮಲವಾದ, ಇನಿದಾದ ಕಂಠ ! ಆಕೆಯ ಮಾತು ಕೇಳಿ, ತಲೆ ಎತ್ತಿ ನೋಡಿದೆ. ಆಕೆಯೂ ನನ್ನನ್ನೇ ನೋಡುತ್ತಿದ್ದಳು. ತುಟಿಯಮೇಲೆ ಮಿಂಚಿನ ಹನಿಯಂತೆ, ಮಂದಹಾಸ ಮಿನುಗುತ್ತಿತ್ತು. ಆದರೂ ಗುರುತು ಸಿಗಲಿಲ್ಲ.

ನನ್ನ ಉತ್ತರ, ಆಕೆಯ ಮಾತು ಕೇಳಿ ಸೋದರಮಾವ ಬಿದ್ದು ಬಿದ್ದು ನಗಲಾರಂಭಿಸಿದರು. ಅವರ ನಗು ಕೇಳಿ ನನಗೆ ನಾಚಿಕೆಯಾಯಿತು. ಒಂದು ಗಳಿಗೆಯಾದಮೇಲೆ, ಅವರು ತಮ್ಮ ನಗೆ ತಡೆದುಕೊಂಡು 'ಅಯ್ಯೋ ಹುಚ್ಚಾ, ಲಲಿತಾ ಅಲ್ಲವೇನೋ. ಅವಳನ್ನು ಮರೆತುಬಿಟ್ಟೆಯಾ' ಎಂದರು.

ಲಲಿತಾ ! ಸೋದರಮಾವನ ಮಗಳು, ನನಗೆ ಕೊಡಬೇಕೆಂದು ಮಾಡಿದ್ದ ಹೆಣ್ಣು. ಹುಚ್ಚಾಗಿ ಅವಳ ಮುಖ ನೋಡುತ್ತಾ 'ತುಂಬಾ ಬೆಳೆದು ಬಿಟ್ಟಿದ್ದಾಳೆ' ಎಂದೆ.

'ಹೂ. ಬೆಳೆದು ಬಂಗಾರದ ಬಳ್ಳಿಯಾಗಿದ್ದಾಳೆ' ಎಂದರು, ಸೋದರ ಮಾವ ಅಭಿಮಾನ ತುಂಬಿದ ಕಣ್ಣಲ್ಲಿ ಮಗಳನ್ನು ನೋಡುತ್ತಾ.

ಬಂಗಾರದ ಬಳ್ಳಿ! ಹೂ, ಬಂಗಾರದ ಬಳ್ಳಿ! ಅದೇ ಸರಿಯಾದ ಮಾತು ! ಒಪ್ಪುವ ಮಾತು.

ಅವಳ ಮುಖವನ್ನೇ ದಿಟ್ಟಿಸಿ ನೋಡುತಿತ್ತು ನನ್ನ ಕಣ್ಣು. ನನ್ನ ಕಣ್ಣಿನ ಉರಿ ತಗುಲಿದಂತೆ, ಅವಳ ಮುಖ ಅಶಕ್ತವಾಗಿ ಕಾದ ಬಂಗಾರವಾಯಿತು. ತಲೆ ತಗ್ಗಿಸಿಕೊಂಡಳು.

ಯಾರೆಂಬುದು ಗೊತ್ತಾದಮೇಲೆ ನಮ್ಮಿಬ್ಬರ ನಡುವೆ ಇದ್ದ ಯಾವುದೋ ಬಿಗಿಯನ್ನು ಸಡಲಿಸಿದಂತಾಯಿತು. ಆದರೂ ಮರೆವಿನ ಅಪ

ನೀವು – ಇತರರ ಬಾಯಲ್ಲಿ ಹೇಗೋ ಕೇಳುವ ಆ ಮಾತು, ಅವಳ ಬಾಯಲ್ಲಿ ಎಷ್ಟು ಬಿರುಸಾಗಿ ಕೇಳುತ್ತಿದೆ.

'ಇಲ್ಲಿ ನೋಡು ಲಲಿತಾ'– ಲಲಿತಾ. ಓ! ಏನು ಲಲಿತವಾದ ಹೆಸರು ಈ ಲಾವಣ್ಯಮೂರ್ತಿಗೆ! ನನಗರಿವಾಗದಂತೆಯೇ ಅವಳ ಹೆಸರು ನನ್ನ ಬಾಯಿಂದ ಹೊರಬಿತ್ತು.

ನನ್ನ ಬಾಯಿಂದ ತನ್ನ ಹೆಸರು ಕೇಳಿದ ಕೂಡಲೇ ಅವಳ ಮೈ ಸ್ವಲ್ಪ ಕಂಪಿಸಿ, ಮುಖ ರಕ್ತವೇರಿತು. ಪ್ರಯತ್ನಪಟ್ಟು 'ಏನು' ಎಂದಳು.

'ಕೂತುಕೋ ಇಲ್ಲಿ' ಎಂದು ಬೇಕೆಂತಲೇ ಸ್ವಲ್ಪ ಬಿರುಸಾಗಿ ಹೇಳಿದೆ. ಬಿರುಸಾದ ನನ್ನ ಧನಿ ಕೇಳಿ ಅವಳು ನಸು ಬೆಚ್ಚಿದಳು. 'ಏನು?' ಎಂದಳು ಇನ್ನೊಮ್ಮೆ – ಕುಳಿತುಕೊಳ್ಳುತ್ತ.

"ನಾನೇನು ಅಪರಿಚಿತನೇ. ಎರಡು ದಿನ ಇದ್ದು ಹೋಗುವ ಯಾರೋ ದಾರಿಗಾಣದೆ ಬಂದ ಹೊಸಬನೇ ಏನು?" ಎಂದೆ. ಏನು ಅಚಾತುರ್ಯ ವಾಯಿತೋ ಎಂತ ಬೆದರಿ ಅವಳು ನನ್ನ ಮುಖವನ್ನೇ ನೋಡುತ್ತ 'ಏನಾಯಿತು' ಎಂದಳು. ನೋವಿತ್ತು ಅವಳ ಧ್ವನಿಯಲ್ಲಿ.

"ಆಗುವುದೇನು. ಸರ್ವನಾಶವಾಗಿ ಹೋಯಿತು" ಎಂದೆ. ನನ್ನ ಮಾತು ಕೇಳಿ ಈ ಬಾರಿ ಅವಳು ನಿಜವಾಗಿಯೂ ಗಾಬರಿಗೊಂಡಳು. ಮೂಕವಾಗಿ ಅವಳ ಜಿಂಕೆಗಣ್ಣು ಮತ್ತೆ ಮೊದಲಿನ ಪ್ರಶ್ನೆಯನ್ನೇ ಕೇಳಿತು.

"ನಾನೇನೂ ಈಗ ನಿನಗೆ ಅಪರಿಚಿತನಲ್ಲ ತಾನೆ?"

"ಅಲ್ಲ."

"ನಿಶ್ಚಯವಾಗಿಯೂ?"

"ನಿಶ್ಚಯವಾಗಿಯೂ."

"ಹಾಗಾದರೆ ಹೀಗೇಕೆ ಮಾಡುತ್ತಿದೀಯ?"

"ಏನು ಮಾಡಿದೆ?"

"ಹೇಳಬೇಕೇ?"

"ಹೂ" – ದಿಗ್ಭ್ರಮೆಗೊಂಡಿದ್ದಳವಳು ನನ್ನ ಮಾತು ಕೇಳಿ.

"ನಾನು ಅಪರಿಚಿತನಲ್ಲವಾದರೆ, 'ನೀವು' ಎಂದು ಮಾತಾಡಿಸುವುದೇಕೆ ಹೇಳು?"

"ಅಯ್ಯೋ! ಇಷ್ಟೇನೇ! ನಾನೇನಾಯಿತೋಂತ ಇದ್ದೆ" ಎನ್ನುತ್ತ ನಗಲಾರಂಭಿಸಿದಳು. ಇದುವರೆಗೂ ಎದೆಯಲ್ಲಿ ಹೆಪ್ಪುಗಟ್ಟುತ್ತಿದ್ದ ಭೀತಿ ಇದ್ದಕ್ಕಿದ್ದ ಹಾಗೆ ನಗೆಯ ನೀರಾಗಿ ಚಿಮ್ಮಲಾರಂಭಿಸಿತು. ನಾನೂ ನಕ್ಕೆ.

"ಇಷ್ಟೇನೇ ಎಂದರಾಗಲಿಲ್ಲ" ಎಂದೆ.

"ಮತ್ತೇನು ಮಾಡಬೇಕು?" ಹಗುರವಾದ ಹೃದಯದಿಂದ ಕೇಳಿದಳು.

"ಇನ್ನುಮೇಲೆ 'ನೀವು' ಎನ್ನದೆ 'ನೀನು' ಎನ್ನಬೇಕು."

"ಸರಿ. ಆಗಲಿ. ಇನ್ನು ಮುಂದೆ ತಾನೆ."

"ಮುಂದೆಯಲ್ಲ, ಈಗಲೇ, ಎಲ್ಲಿ ಹೇಳು?" ಎಂದೆ.

"ಆಗಲಾಗಲಿ" ಎಂದು ಸರಿಯಲಾರಂಭಿಸಿದಳು. ಸರಿಯುತ್ತಿದ್ದ ಅವಳ ಕೈ ಹಿಡಿದು "ಎಲ್ಲಿ ಹೇಳು" ಎಂದೆ.

"ಹ್ಹಾ! ಕೈ ಹೋಯಿತು."

"ಎಲ್ಲೂ ಹೋಗಿಲ್ಲ. ನನ್ನ ಕೈಯಲ್ಲೇ ಇದೆ. 'ನೀನು' ಎನ್ನುವ ವರೆಗೂ ಬಿಡುವುದಿಲ್ಲ."

ನನ್ನ ಹಿಡಿಯೊಳಗಿನ ಅವಳ ಮುಂಗೈ ಬೆವರುತ್ತಿತ್ತು. ನನ್ನ ಹಸ್ತ ಸ್ಪರ್ಶವಾಗಿ ಅವಳ ಮುಖ ಕೆಂಪಾಗಿ, ಎವೆ ತೂಗುತ್ತಿತ್ತು. ಬೇಕೆಂತಲೇ ಹಿಡಿಯೊಳಗಿನ ಕೈಯನ್ನು ಬಲವಾಗಿ ಅದುಮಿ 'ಹೇಳು' ಎಂದೆ.

ನೋವು ತಡೆಯಲಾರದವಳಂತೆ 'ನೀನು' ಎಂದಳು. ಕೈಬಿಟ್ಟೆ. ಕೈಬಿಟ್ಟ ಕೂಡಲೆ, ಬಿಲ್ಲಿನಿಂದ ಬಿಟ್ಟ ಅಂಬಿನಂತೆ ಚಿಗಿದು ನಿಂತು "ಅಷ್ಟು ಬರಲಿ. ನಿಮಗೆ ಮಾಡಿಸುತ್ತೇನೆ" ಎಂದಳು. ತುಂಬು ನಗೆ ನಗುತ್ತಾ.

"ಬ್ಬಾ. ಕೆಟ್ಟ ಹುಡುಗಿ ಮತ್ತೆ 'ನಿಮಗೆ' ಎನ್ನುತ್ತೀಯಾ?' ಎಂದೆ ಹೆದರಿಸುತ್ತಾ.

"ನಿಮಗೆ .... ನಿಮಗೆ .... ನಿಮಗೆ" ಎಂದು ನೂರು ಬಾರಿ ಹೇಳಿ, ಒಳಗೆ ಹಾರಿದಳು ಲಲಿತಾ.

ನನ್ನೆದೆಯೊಳಗೆ ನಾಲ್ಕಾರು ಮಧುರವಾದ್ಯ ಒಟ್ಟಿಗೇ ಹಾಡುತ್ತಿದ್ದವು– ಏಳು ಶ್ರುತಿಯಲ್ಲಿ.

ಅಂದಿನಿಂದ ನಮ್ಮಿಬ್ಬರಲ್ಲಿ ಸಲಿಗೆ ಹೆಚ್ಚಾಯಿತು.

ಪರಿಚಯ ಬೆಳೆದ ಹಾಗೆ ನನಗೆ ಅವಳಲ್ಲಿಯ ಒಂದೊಂದು ಮೋಹಕ ಗುಣವೂ ಗೊತ್ತಾಗತೊಡಗಿತು. ಮೊದಲ ನೋಟಕ್ಕೆ ಗಾಂಭೀರ್ಯದ ಮೂರ್ತಿಯಂತೆ ಕಂಡ ಅವಳ ಪುಟ್ಟ ಪಾರಿವಾಳದ ನ್ಹೆಯಲ್ಲಿ ಎಂಥ ಹಾಸ್ಯ, ರಸಜ್ಞತೆ, ಜೀವನದ ಆನಂದ, ಬಾಳಬೇಕೆನ್ನುವ ಬಯಕೆ, ಅಸ್ಪಷ್ಟ ವಿಶ್ವಾಸ ಅಡಗಿದೆ ಎನ್ನುವುದು ಅರಿವಾಗಲಾರಂಭವಾಯಿತು.

ಅವಳಲ್ಲಿ ಒಂದು ಗುಣ. ಯಾವುದನ್ನೂ ಬಿಚ್ಚಿ ಹೇಳುವುದಿಲ್ಲ; ಬಹು ಸೂಚ್ಯ. ಕುಂಚದ ಒಂದು ನವಿರಾದ ರೇಖೆಯಲ್ಲಿ, ವಿಶ್ವದ ಅನಂತ ವಿಸ್ತಾರವನ್ನೆ ತೋರಿಸುವ ಕಲಾವಿದನ ಕೈವಾಡ. ಒಂದು ಮಾತು, ಒಂದು ಕಿರು ನಗೆ, ಒಂದೇ ಗಂಟು ಹುಬ್ಬು, ಅವಳ ಹೃದಯದೊಳಗಿನ ಭಾವಪ್ರಪಂಚವನ್ನೇ ಬಯಲಿನೊಳಗಿಡುತ್ತಿದ್ದವು. ಅವಳು ತನ್ನ ನಡತೆ ಯಿಂದ : ಏನನ್ನೂ ತೋರಿಸದಿದ್ದರೂ, ಅವಳ ನಡಗೆಯಲ್ಲಿ, ನ್ಹೆಯ ಗೆರೆ ಗೆರೆಯಲ್ಲಿ, ಅವಳೊಳಗೆ ಅಡಗಿದ ಪ್ರಬಲರಾಗಗಳು ತುಂಬಿ ಹೊರಸೂಸು ತ್ತಿದ್ದವು.

ಶ್ರೇಷ್ಠ ಮೂರ್ತಿಕಾರನ ಕಣ್ಣಿಗೆ ಒರಟು ಶಿಲಾ ಖಂಡದೊಳಗೆ ಅದ್ಭುತ ಕಲಾಕೃತಿ ಗೋಚರಿಸುತ್ತದೆಯಂತೆ—ಅವನು ಅದನ್ನು ಕಟೆಯಲು ಮೊದಲು ಮಾಡುವ ಮುನ್ನ. ಲಲಿತೆಯನ್ನು ನೋಡಿದಾಗ ನನಗೊಮ್ಮೆ ಅದು ಜ್ಞಾಪ ಕಕ್ಕೆ ಬರತೊಡಗಿತು. ರಸಿಕನ ಕೈಯಲ್ಲಿ ಸಿಕ್ಕರೆ ಈ ಬಾಲೆ, ವೇಣುವಿದನ ಕೈಯ ಬಿದುರಿನ ಕೊಳಲಿನಂತೆ, ಸಮಸ್ತ ಸ್ವರ, ರಾಗ ಪ್ರಪಂಚವನ್ನೆ ಪಲುಕ ಬಲ್ಲಳು. ಅಂಥ ವಿಶ್ವಶಕ್ತಿ ಅವಳೊಳಗೆ ಹುದುಗಿದೆ. ಹೊರಗೆ ಕಾಣಿಸುವುದು ಈ ಶಕ್ತಿಯ ಅಂಚು ಮಾತ್ರ. ಅಂಥ ಅಂಚು ಒಂದೊಂದು ಕಂಡಾಗಲೂ ಕಾಣಬಲ್ಲ ಶಕ್ತಿ ಇರುವ ಕಣ್ಣಿಗೆ ಆ ಅಂಚಿನಾಚೆಗೆ ಇರುವ ರಾಗಸಾಗರದ ದರ್ಶನವಾಗುತ್ತದೆ. ಇವಳ ಕೈ ಹಿಡಿದವನಿಗೆ ಈ ಅಗೋಚರ ಅನಂತ ಶಕ್ತಿಯ ಅರಿವಾಗಿದೆಯೇ ?

ಈ ಭಾವ ನನ್ನಲ್ಲಿ ಬೆಳೆದ ಹಾಗೆ, ಇವಳು ನನ್ನವಳಾಗಬಹುದಿತ್ತು. ಆದರೆ ತುಟಿಯವರೆಗೆ ಬಂದ ಅಮೃತಪಾತ್ರೆಯನ್ನು ನಾನೇ ನಿರಾಕರಿಸಿ ಮತ್ತಾರೋ ಅದನ್ನು ಹೀರುವ ಹಾಗೆ ಮಾಡಿದೆ ಎನಿಸಿತು.

ನನ್ನ ಜೀವನದಲ್ಲಿ ಮೊಟ್ಟಮೊದಲು ಬಾರಿಗೆ ನಾನು ಆದುದಕ್ಕೆ ಪಶ್ಚಾತ್ತಾಪಪಡಲಾರಂಭಿಸಿದೆ. ಅವಳ ಪರಿಚಯ ಬೆಳೆದಹಾಗೆ ಈ ಪಶ್ಚಾತ್ತಾಪವೂ ಬೆಳೆದು, ನನಗರಿವಾಗದಂತೆಯೇ ನನ್ನೊಳಗೆ ಬೆಂಕಿ ಉರಿಯಲಾರಂಭಿಸಿತು. ಇದು ಏಕೆ, ಏನು ಎಂದು ಅರಿವಾಗುವುದರೊಳಗೇ ನಾನು ಪೂರಾ ಮುಳುಗಿಹೋಗಿ ಹೋಗಿದ್ದೆ.

ಮೊದಮೊದಲು ನನ್ನೊಳಗೆ ಹಬ್ಬುತ್ತಿದ್ದ ಬಯಕೆಯ ಉರಿ ಎಂಥದೆಂಬುದು ಗೊತ್ತಾಗಲಿಲ್ಲ. ನಾನು ಆವರೆಗೆ ಎಷ್ಟೋ ಜನ ಹೆಂಗಸರನ್ನು ನೋಡಿದ್ದೆ; ಎಷ್ಟೋ ಜನರನ್ನು ಅನುಭವಿಸಿ, ಮುಡಿದು ಬಾಡಿದ ಹೂಮಾಲೆಯಂತೆ ಕಿತ್ತೊಗೆದಿದ್ದೆ. ಆದರೆ ಲಲಿತೆಯಲ್ಲಿ, ಅವರಲ್ಲಾರಲ್ಲೂ ಕಾಣದ ಒಂದು ಅಲೌಕಿಕ ಆಕರ್ಷಣೆ ಕಾಣತೊಡಗಿತು. ಅವಳ ಸುತ್ತ ಮನಸು ಹಾರಾಡತೊಡಗಿತು; ಅವಳ ವ್ಯಕ್ತಿತ್ವದ ಪ್ರಭಾವ ವರ್ತುಲದಾಚೆ ಹಾರಲಾರದಂತೆ ಅಲ್ಲಿ ಗರಿ ಹೊಡೆಯತೊಡಗಿತು.

ನಾನು ಎಷ್ಟೋ ಜನ ಸುಂದರಿಯರನ್ನು ಬಯಸಿ, ಅವರು ಸಿಗಲಾರದಾಗ ವ್ಯಥೆಪಟ್ಟಿದೇನೆ. ಆಗ ನನ್ನೆದೆಯಲ್ಲಿ ಮೂಡುತ್ತಿದ್ದುದು, ಬೇಟೆ ಕೈಗೆ ಸಿಗದಂತೆ ತಪ್ಪಿಸಿಕೊಂಡು ಹೋದ ಬೇಟೆಗಾರನ ಕ್ರೋಧ; ಬೇಟೆಯ ಬಗ್ಗೆ ಎಳ್ಳಷ್ಟು ಕನಿಕರವಿರುತ್ತಿರಲಿಲ್ಲ.

ಲಲಿತೆಯ ಬಗ್ಗೆ ಹಾಗಾಗಲಿಲ್ಲ. ಇದುವರೆಗೂ ಕಾಣದ ಕೋಮಲತೆಯೊಂದು ನನ್ನ ಭಾವದಲ್ಲಿ ಮೂಡಿತ್ತು. ದಿಟ್ಟಿಸಿ ನೋಡಿದರೂ, ಅವಳ ಮೈ ಬಾಡಿತೇನೋ ಎಂಬ ಭೀತಿ. ನನ್ನ ಮೋಹದ ಉರಿ ಸೋಕಿದರೆ ಹೇಗೋ ಏನೋ ಎಂಬ ಸಂಶಯ. ಆದರೂ ಅವಳನ್ನು ಕಾಣಲಾರದೆ ಇರಲಾರೆನೆನ್ನತೊಡಗಿತು ಮನಸು.

ಹಿಂದೆ ಹೆಂಗಸರನ್ನು ಕಂಡಾಗ ನನ್ನ ಹೃದಯದಲ್ಲಿ ಅತೃಪ್ತಿಯ ತಾಂಡವ ನಡೆಯುತ್ತಿತ್ತು. ಆದರೆ ಲಲಿತೆಯನ್ನು ಕಂಡಾಗ, ಅಲ್ಲಿ ಇಲ್ಲಿ ಹಾರಿ ಬೇಸತ್ತ ಹಕ್ಕಿ ಗೂಡು ಕಂಡಂತೆ, ಮನಸು ಶಾಂತವಾಗುತ್ತಿತ್ತು; ತೃಪ್ತಿ ಮೂಡುತ್ತಿತ್ತು.

ನಿಜ. ಕಾಮದ ಕಡಲಿನ ಭೋರ್ಗರೆವ ತೆರೆಗಳ ಮೇಲೆ ಎಲ್ಲೆಲ್ಲೊ ಹೊಯ್ದಾಡಿ ಬಂದ ನನ್ನ ಹೃದಯ ಪ್ರೇಮದ ರೇವನ್ನು ಕಂಡಿತ್ತು.

'ನನ್ನ ಬಾಳಿನಲ್ಲಿ ಮೊಟ್ಟಮೊದಲ ಬಾರಿಗೆ ನನಗೆ ಪ್ರೇಮದ ಅಮೃತಾನುಭವವಾಯಿತು. ಆದರೆ ಅದಕ್ಕೆ ಬರಬೇಕಾದ ಹದ ಬಂದಿರಲಿಲ್ಲ. ತಪಸ್ಸು ಮಾಡದೆ ಬಂದ ಸಿದ್ಧಿಯಂತೆ ಅದು ದುರ್ಬಲವಾಗಿತ್ತು.

ಲಲಿತೆ ನನ್ನ ಬಾಳ ದೋಣಿಯ ರೇವು ಎಂದು ಅರಿವಾದ ಕೂಡಲೇ, ನನಗೆ ಹೆದರಿಕೆಯಾಗಲಾರಂಭಿಸಿತು. ಈ ರೇವು ನನ್ನದಲ್ಲ, ಇನ್ನಾರದೊ. ಈ ರೇವಿನಲ್ಲಿ ನನಗೆ ಎಡೆಯಿಲ್ಲ. ಯಾವುದೋ ಪುಣ್ಯಫಲದಿಂದ ಅದರ ದರ್ಶನವಾಗಿದೆ, ಅಷ್ಟೆ. ಮತ್ತೆ ನನ್ನ ದೋಣಿಗೆ ಬಿರುಗಾಳಿ ಮೊರೆವ ಕಡಲೇ ಗತಿ ಎಂಬ ಹೆದರಿಕೆ ಹರಡಲಾರಂಭಿಸಿತು. ಈ ರೇವಿನ ಅಂಚಿನಲ್ಲಿ ನಿಂತ ಕಣ್ಣಿಗೆ ಹಿಂದೆ ಹರಡಿದ ಕಡಲ ಕರಾಳತೆ ಅರಿವಾಗಿ, ಹಿಂದೆ ಹೋಗಲು ಹೆದರ ತೊಡಗಿತು. ಏನಾದರೂ ಮಾಡಿ, ಈ ರೇವಿನಲ್ಲೆ ತಂಗಬೇಕೆಂದು ಕಾತರಿಸಿತು. ನನ್ನದಾಗಲು ಬಂದು ನನ್ನ ಮೂರ್ಖತನದಿಂದ ಪರವಶವಾಗಿ ಹೋಗಿದ್ದು, ಈಗ ಹೇಗೋ ಕಣ್ಣಿಗೆ ಕಾಣಿಸಿದ ರೇವನ್ನು ಏನಾದರೂ ಮಾಡಿ ನನ್ನದು ಮಾಡಿಕೊಳ್ಳಬೇಕು. ಹಾಗಾದರೇ ಉಳಿವು, ಇಲ್ಲವಾದರೆ ಅಳಿವು ಎಂದು ನನ್ನ ಹೃದಯ ನನ್ನ ಮೇಲೇ ಜೊಂಬಿ ಎದ್ದು, ಹಿಂದೆ ಹೋಗುವುದಿಲ್ಲವೆಂದು ಮುಷ್ಕರ ಹೂಡಿತು.

ಅಂದು ನನಗೆ ದಿವ್ಯ ಯಾತನೆಯ ಅನುಭವವಾಗತೊಡಗಿತು. ಅರಿವಾಗದಂತೆಯೇ ನಾನು ಅವಳಲ್ಲಿ ಬೆರೆತು ಹೋಗಿದ್ದೆ. ಈ ಯಾತನೆಗೆ ಏನು ಹೆಸರೊ, ನಾನು ಹೇಳಲಾರದಾದೆ.

ಅಂತೂ ಈ ಭಾವ ಮಥನದಲ್ಲಿ ಹೃದಯ ವಿಹ್ವಲವಾಗುತಿತ್ತು.

ಈ ಒಳ ಹೋರಾಟವಲ್ಲಿ, ನಾನು ಬಂದ ಕೆಲಸ ಮುಗಿಯುವುದೂ ನಿಧಾನವಾಗುತ್ತಿತ್ತು. ಕಡೆಗೊಂದು ದಿನ ಅದು ಮುಗಿಯಿತು.

ಅದಕ್ಕೆ ಮುನ್ನಾ ದಿನ ಸಂಜೆ, ಸೋದರಮಾವನ ಜೊತೆಗೆ ತೋಟ ನೋಡಿಕೊಂಡು ಬರಲೆಂದು ಹೋಗಿದ್ದೆ. ಬರುವಾಗ ದಾರಿಯಲ್ಲೆ ಮಳೆ ಬಂತು. ಮಳೆಯೆಂದರೆ, ಮುಸಲಧಾರೆ. ಮೈ ನೆನೆದಷ್ಟೆ, ಮೈಯೊಳಗೂ ಇಳಿದುಬಿಟ್ಟಿತ್ತು ಆ ತೇವ. ಹೇಗೆ ಮನೆ ಸೇರಿದೆವೊ. ಮಳೆಯೊಳಗೆ ನೆನೆದು, ಕಣ್ಣೆರಡೂ ಬೆಂಕಿ ಹಾಕಿದಂತೆ ಉರಿಯುತ್ತಿದ್ದವು. ತಲೆ ಸಿಡಿಯುತ್ತಿತ್ತು. ಮನೆ ಸೇರಿ, ಬಟ್ಟೆ ಬದಲಸಿದ್ದೇ ಜ್ಞಾಪಕ, ಕೆರಳಿಬಂತು ಜ್ವರ.

ಏರಿ ಏರಿ ಬಂದ ಜ್ವರದ ಉಗ್ರವೇಗಕ್ಕೆ ಅರಿವು ಮಂಕಾಗಿ ಹೋಯಿತು. ಅರಿವಿಗೂ ಮರೆವಿಗೂ ಕಾಳಗವಾಗತೊಡಗಿತು. ಈಗ ಅರಿವಿಗೆ ಮೇಲುಗೈ. ಈಗ ಮರೆವಿಗೆ ಮೇಲುಗೈ. ಆ ತಾಕಲಾಟದಲ್ಲಿ ನಾನು ಸೋತುಹೋದೆ.

ನಿಜವಾಗಿ, ಮರೆವನ್ನು ಅರಿವು ಗೆದ್ದು, ಇಹಸ್ಮೃತಿ ಬಂದಾಗ, ಆಳಕ್ಕೆ ತುಳಿದು, ಮುಗಿಲಿಗೆ ತೂರುವ ಬಿರುಗಾಳಿಯ ಬಿರುಸಿನಿಂದ ತಪ್ಪಿಸಿ ಕೊಂಡು ಬಂದ ನಾವಿಕನಂತಿದ್ದೆ ನಾನು. ಎಚ್ಚರ ಬಂದು ಕಣ್ಣು ಬಿಟ್ಟಾಗ ತಲೆಯಕಡೆ ಸೋದರಮಾವ, ಕಾಲ ಬಳಿ ಲಲಿತಾ ಕಂಡಳು.

'ಮಾವ.....ಲಲಿತಾ.....' ಎಂದೆ.

ಸೋದರಮಾವ ಹಣೆಯಮೇಲೆ ಕೈಯಾಡಿಸಿ ಏನು ಬೇಕಪ್ಪಾ ಎಂದು ಯಾವುದೋ ಭಾರ ಇಳಿದ ಹಾಗೆ ನಿಟ್ಟುಸುರಿಟ್ಟರು.

'ತುಂಬಾ ಬಾಯಾರಿಕೆಯಾಗುತ್ತಿದೆ' ಎಂದೆ. ಲಲಿತಾ ಒಳಗೆ ಹೋಗಿ ಕಾಫಿ ತಂದುಕೊಟ್ಟಳು. ಕುಡಿದೆ. ಜ್ವರ ಇಳಿಯುತ್ತಿತ್ತು. ಆ ರಾತ್ರಿ ನಿರಾತಂಕವಾಗಿ ನಿದ್ದೆ ಬಂತು.

ಮಾರನೆ ದಿನ ಬೆಳಿಗ್ಗೆ ಎಚ್ಚರವಾದಾಗ ಹತ್ತಿರ ಯಾರೂ ಇರಲಿಲ್ಲ. ಆ ಮನೆ ಆ ಬೆಳಗು ಎಲ್ಲವೂ ಅಪರಿಚಿತವಾಗಿ ಕಾಣುತ್ತಿತ್ತು, ಇನ್ನೂ ಜ್ವರದ ಮಂಪರವಿದ್ದ ಕಣ್ಣಿಗೆ. ಏಳಲಾರದ ಸ್ವರದಲ್ಲಿ 'ಲಲಿತಾ' ಎಂದು

'ಓ ಬಂದೆ' ಎಂದವಳೇ ಒಳಗಿನಿಂದ ಲಲಿತಾ ಹತ್ತಿರಕ್ಕೆ ಬಂದಳು. 'ಕಾಫಿ ಕೊಡಲೆ' ಎಂದಳು.

'ಏನೂ ಬೇಡ. ಕೂತುಕೊ' ಎಂದೆ. ದಿಂಬಿನ ಹತ್ತಿರ ಕೂತು ಕೊಂಡಳು. ಮೆತ್ತಗೆ ಅವಳ ಕೈಹಿಡಿದುಕೊಂಡೆ. ಅವಳ ಕರ ಸ್ಪರ್ಶದಲ್ಲಿ ಅದಾವ ಮೋಡಿಯಿತ್ತೋ. ಹಾಗೇ ಒಂದು ಗಳಿಗೆ ಏನೂ ಮಾತಾಡದೆ, ಅವಳ ಕೈಯನ್ನು ಹಿಡಿದು ಮಲಗಿದ್ದೆ. ಅಕಾರಣವಾಗಿ ನನ್ನ ಕಣ್ಣು ಕಂಬನಿ ತುಂಬುತ್ತಿತ್ತು. ಯಾವುದೋ ಹೇಳಬೇಕೆಂದು ಬಯಸಿದ ಮಾತು, ಹೊರಬರದೆ ತಲೆ ಮರೆಸಿಕೊಳ್ಳುತ್ತಿತ್ತು. ಏನೂ ಮಾತಾಡಲಾರದೆ, ಅವಳ ಮುಖ ನೋಡಿದೆ – ಕಂಬನಿಯ ತೆರೆ ಹಾಕಿದ ಕಣ್ಣಿನಿಂದ. ಅವಳ ಮುಖ ಕರುಣೆಯಲ್ಲಿ ತೊಯ್ದು ದೈವಿಕವಾಗಿತ್ತು. ಅವಳ ಕೈ ಹಿಡಿದ ನಾನು ಜೀವ

ಹೋಗಲಿದ್ದ ಹಕ್ಕಿಯು ಹಾಗಿದ್ದರೆ, ಅವಳು ಹೆದರಬೇಡ, ಉಳಿಸಿಕೊಳ್ಳುತ್ತೇನೆ, ಎನ್ನುವ ಕರುಣಾದೇವಿಯಂತೆ ಕಂಡಳು. ಸ್ವಲ್ಪ ಹೊತ್ತು ಸುಮ್ಮನಿದ್ದು ನಂತರ 'ಕಾಫಿ ತರುತ್ತೇನೆ' ಎಂದು ಎದ್ದು ಹೋದಳು. ಅವಳ ಧ್ವನಿ ಭಾರವಾಗಿತ್ತು, ಹಾಗೇ ನನ್ನೆದೆಯಲ್ಲಿ ಮುಳುಗಿಹೋಯಿತು.

ಅಂದು ಮಧ್ಯಾಹ್ನವೆಲ್ಲಾ ಮತ್ತೆ ಅವಳೊಂದಿಗೆ ಮಾತಾಡುವ ಅವಕಾಶ ಸಿಗಲಿಲ್ಲ. ಸೋದರಮಾವ ಮನೆಗೆ ಬಂದವರು, ಅವರ ಊಟ, ನನ್ನ ಗಂಜಿ ತೀರಿದಮೇಲೆ ನನ್ನ ಹತ್ತಿರ ಯಾವ್ಯಾವುದನ್ನೋ ಮಾತಾಡುತ್ತಾ ಕೂತಿದ್ದರು. ನನ್ನ ಬಾಯಿ ಅವರೊಂದಿಗೆ ಮಾತಾಡುತ್ತಿದ್ದರೂ ನನ್ನ ಹೃದಯ ಮಾತ್ರ ಯಾವುದೋ ಕನಸು ಕಾಣುತ್ತಿತ್ತು.

ಮಧ್ಯಾಹ್ನ ನಾಲ್ಕು ನಾಲ್ಕೂವರೆ ಗಂಟೆಯ ಹೊತ್ತಿಗೆ ಪಕ್ಕದ ಹಳ್ಳಿಯ ಶಾನುಭೋಗರ ಮನೆಯ ಆಳು ಬಂದು, ಅವನ ಮಕ್ಕಳಲ್ಲಿ ಆಸ್ತಿ ಪಾಲು ಮಾಡಲು ಬರಬೇಕೆಂದು ಹೇಳಿದ. ಸೋದರಮಾವ ತುಂಬಾ ಯೋಚಿಸಿ ಕಡೆಗೆ ಹೋಗಲು ಒಪ್ಪಿಕೊಂಡರು. ನನ್ನ ಜ್ವರ ಇಳಿದದ್ದರಿಂದ, ಅವರಿಗೆ ನನ್ನ ಬಗ್ಗೆ ಯೋಚನೆ ಇರಲಿಲ್ಲ. ನಾನು ಇದ್ದುದ್ದರಿಂದ ಲಲಿತೆಯನ್ನೊಬ್ಬಳನ್ನೇ ಹೇಗೆ ಮನೆಯಲ್ಲಿ ಬಿಟ್ಟುಹೋಗಬೇಕೆಂಬ ಚಿಂತೆಗೂ ಅವಕಾಶವಿರಲಿಲ್ಲ.

ಆದರೂ ಹೋಗುವ ಮುನ್ನ ಲಲಿತೆಗೆ 'ರಾತ್ರಿ ಬೇಕಾದರೆ, ತೋಟದ ರೈತನಿಗೆ ಹೇಳಿ ಕಳಿಸಿ, ಇಲ್ಲೇ ಮಲಗಿಕೊಳ್ಳುವಹಾಗೆ ಹೇಳು. ನಾನು ಆದರೆ ರಾತ್ರಿಯೇ ಬರುತ್ತೇನೆ. ಮುಕ್ಕಾಲುಪಾಲು ಆಗಲಿಕ್ಕಿಲ್ಲ. ಏನಾದರೂ ನಾಳೆ ಮಧ್ಯಾಹ್ನದ ಹೊತ್ತಿಗೆ ಬರುತ್ತೇನೆ. ಇವನಿಗೆ ರಾತ್ರಿ ಊಟಕ್ಕೆ ತಿಳಿ ಸಾರು ಅನ್ನ ಕೊಡಬಹುದೆಂದು ಹೇಳಿದ್ದಾರೆ. ನೋಡಿಕೋ. ಮನೆ ಕಡೆ ಹುಷಾರು' ಎಂದು ಎಲ್ಲ ವಿಷಯಕ್ಕೂ ಎಚ್ಚರಿಕೆ ಕೊಟ್ಟು ಹೊರಟುಹೋದರು.

ಸೋದರಮಾವ ಹೊರಟುಹೋದ ಗಳಿಗೆ ನನ್ನ ಮನಸಿಗೆ ಯಾವುದೋ ಶುಭ ಚಿಂತೆ, ಏನೋ ಸಂತೋಷ. ಮನಸು ಉಯ್ಯಾಲೆಯಾಡತೊಡಗಿತು.

ಸಂಜೆಯಾಗುವವರೆಗೂ ಲಲಿತಾ ಒಳಗಡೆ ಕೆಲಸ ಮಾಡುತ್ತಿದ್ದವಳು ನನ್ನ ಕಡೆ ಸುಳಿಯಲಿಲ್ಲ. ಯಾವುದೋ ಕಾದಂಬರಿ ಓದುತ್ತಿದ್ದೆ. ಕಣ್ಣು ಕಾದಂಬರಿಯಲ್ಲಿ, ಮನಸು ಕನಸಿನಲ್ಲಿ. ಅಂದು ಯಾವುದೋ ಒಂದು

ಅದ್ಭುತ ಘಟನೆ ನಡೆಯುವಂತೆ, ಹೃದಯ ಸೂಚಿಸುತ್ತಿತ್ತು. ಕಾರಣ ವಾವುದೂ ಗೊತ್ತಾಗಲಿಲ್ಲ.

ಸಂಜೆಯ ಮಬ್ಬುಗತ್ತಲು ಕವಿಯುತ್ತಿದ್ದಹಾಗೆ, ಯಾವುದೋ ಅವ್ಯಕ್ತ ಭಾವ ಸನ್ನಿದೆಯಲ್ಲಿ, ನೆರೆಯಂತೆ ಏರುತ್ತಿತ್ತು.

ಮಬ್ಬುಗತ್ತಲು ಬಲಿತಕೂಡಲೇ, ಲಲಿತಾ ದೀಪ ಹಚ್ಚಿಕೊಂಡು ತಂದಳು. ದೀಪ ಹಿಡಿದು ಬರುವ ಅವಳನ್ನು ನೋಡಿ ನನಗೆ, ನನ್ನ ಕತ್ತಲು ಕವಿದ ಬಾಳಿನಲ್ಲೇ ದೀಪ ಹಿಡಿದುಕೊಂಡು ಬರುತ್ತಿದ್ದ ಹಾಗೆನ್ನಿಸಿತು.

ಇದ್ದಕ್ಕಿದ್ದಹಾಗೇ ಒಂದು ಪ್ರಶ್ನೆ ತಲೆ ಎತ್ತಿತು. ಲಲಿತೆಯನ್ನು ನಾನು ಮದುವೆ ಮಾಡಿಕೊಳ್ಳಲು ಒಮ್ಮೆ ತಿರಸ್ಕರಿಸಿದ್ದೆ. ಈಗ ನನ್ನ ಬಗ್ಗೆ ಅವಳಿಗೆ ಹೇಗೆನಿಸುತ್ತಿರಬಹುದು ? ಈ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಶಕ್ತಿ ಇರುವುದು ಅವಳೊಬ್ಬಳಿಗೇ. ಅವಳನ್ನೇ ಕೇಳಬಾರದೇಕೆ ?

ಮನಸಿನಲ್ಲಿ ಮೂಡಿದ ಮಾತು ಎಷ್ಟೇ ಕಟುವಾಗಿರಲಿ, ಅದನ್ನು ನಾನೆಂದೂ ಮುಚ್ಚಿಕೊಂಡಿಲ್ಲ. ಸ್ಪಷ್ಟವಾಗಿ ಆಡಿ ತೋರಿಸಿದೇನೆ. ಅದೇ ಅಭ್ಯಾಸವಾಗಿ ಹೋಗಿದೆ. ಈ ಅಭ್ಯಾಸ ಒಳ್ಳೆಯದೊ, ಕೆಟ್ಟದೋ ನಾನೇನೂ ಹೇಳಲಾರೆ. ಅಂತೂ, ಅಂದೂ ಈ ಅಭ್ಯಾಸವೇ ತನ್ನ ಅಧಿಕಾರ ನಡೆಸಿತು. ದೀಪ ಇಟ್ಟು ಹೋಗಲು ಬಂದ ಲಲಿತಳನ್ನು ನೋಡಿ : 'ಕೂತುಕೊ ಬಾ ಲಲಿತಾ' ಎಂದೆ.

'ಏನು' ಎಂದಳು. ಅವಳ ಧ್ವನಿ ವಿಚಿತ್ರವಾಗಿತ್ತು.

'ಸ್ವಲ್ಪ ನಿನ್ನ ಹತ್ತಿರ ಮಾತಾಡುವುದಿತ್ತು.'

'ಈಗ ಮಾತಾಡಲೆಲ್ಲಿ ಬಿಡುವು. ಅನ್ನ ಒಲೆಮೇಲಿಟ್ಟು ಬಂದಿದೇನೆ. ಆಮೇಲೆ ಮಾತಾಡೋಣ.'

ಅನ್ನ ಇರಲಿ. ಕೂತುಕೊ. ಒಂದು ಪ್ರಶ್ನೆ ಕೇಳಬೇಕೆಂದಿದೇನೆ. ಹೃದಯಸಾಕ್ಷಿಯಾಗಿ ಉತ್ತರ ಕೊಡುತ್ತೀಯಾ ?'

ನನ್ನ ಮಾತು ಕೇಳಿ ಅವಳು ನನ್ನನ್ನು ವಿಚಿತ್ರವಾಗಿ ದಿಟ್ಟಿಸಿ ನೋಡಿದಳು. ದೀಪದ ಹಿಂದೆ ನಿಂತ ಅವಳ ಹಿಂದೆ, ಗೋಡೆಯುದ್ದಕ್ಕೂ, ಅವಳ ನೆರಳು ನಿಂತಿತ್ತು. ಒಂದು ಗಳಿಗೆ ಹಾಗೇ ಅನಿರ್ಧಾರವಾಗಿ ನಿಂತಿದ್ದು ಹಾಗೇ ನಿಂತ ಕಡೆಯಲ್ಲೆ ಕೂತಳು. 'ಏನು ?'

‘ ಹತ್ತಿರ ಬಾ ಹೇಳುತ್ತೇನೆ.’

‘ ಏಕೆ ? ದೂರವಿದ್ದರೆ ಅಡ್ಡಿಯೆ ? ’

‘ ಹೂ. ಹತ್ತಿರವಿರಬೇಕಾದವರು ದೂರವಿದ್ದರೆ ದೂರ ಯಾನಾಗಲೂ ಅಡ್ಡಿಯೇ ? ’ ಯಾರೋ ನನ್ನಿಂದ ಈ ಮಾತಾಡಿಸಿದರು : ಅಪ್ರಯತ್ನ ವಾಗಿ ಈ ಮಾತು ಹೊರಬಂತು.

‘ ಏನೋ ವಿಚಿತ್ರವಾಗಿ ಮಾತಾಡುತ್ತಿದೀರ.’

‘ ಮತ್ತೆ ‘ ರ ’ ! ಜೆಕಗ್ಗೆಯೇ ನಾನು ‘ ನೀನು ’ ಎಂತ ಮಾತಾಡಿಸು ಅಂತ ಹೇಳಲಿಲ್ಲೆ ? ’

‘ ನೀವು ಅಂದರೆ ತಪ್ಪೆ ? ’

‘ ಅನ್ನಬಾರದವರು ಅಂದರೆ ಅದು ತಪ್ಪಷ್ಟೇ ಅಲ್ಲ ; ಎದೆ ಇರಿವ ಯಾತನೆ. ಇದರಲ್ಲೆ ಮಾತು ಮುಗಿಸಲಾರೆ ಲಲಿತಾ. ಇನ್ನು ನೀನು ನನ್ನನ್ನು ಮಾತಾಡಿಸುವಾಗ ‘ ನೀವು ’ ಅಂದರೆ ನನ್ನಾಣೆ.’

“ ಛಿ ! ದೀಪ ಹಚ್ಚುವ ಹೊತ್ತಿನಲ್ಲೀ ಹಾಳು ಮಾತಾಡಬೇಡಿ ” ಅಪ್ರ ಯತ್ನವಾಗೇ, ಅವಳ ಕೈ ನನ್ನ ಬಾಯನ್ನ ಮುಚ್ಚಿತ್ತು.

ಹಾಗೇ ಅವಳ ಕೈಯನ್ನು ಹಿಡಿದುಕೊಂಡು, ‘ ಸರಿ ಹಾಗಾದರೆ ಆ ವಿಚಾರ ಇತ್ಯರ್ಥವಾದಂತಾಯಿತು. ಇಲ್ಲಿ ನೋಡು ಲಲಿತಾ. ನಾನೊಂದು ಪ್ರಶ್ನೆ ಕೇಳುತ್ತೇನೆ, ನನ್ನ ಮುಖ ನೋಡಿ ಉತ್ತರ ಹೇಳು.’

ನಾನಿನ್ನೂ ಪ್ರಶ್ನೆ ಕೇಳದಿದ್ದರೂ, ಅವಳ ಕಣ್ಣು ನನ್ನ ಮುಖವನ್ನೇ ದಿಟ್ಟಿಸುತ್ತಿತ್ತು.

‘ ಪ್ರಶ್ನೆ ಏನು ಹೇಳು ? ’

ಮೊಟ್ಟಮೊದಲ ಬಾರಿಗೆ ಲಲಿತಾ ನನ್ನನ್ನು ಏಕವಚನದಲ್ಲಿ ಮಾತಾಡಿ ಸಿದಳು. ‘ಲಲಿತಾ — ಏಕ ವಚನದಲ್ಲಿ ?

‘ ತುಂಬಾ ಹಿಂದಿನ ಮಾತು. ಮಾವ ನಿನ್ನನ್ನು ನನಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದರು. ಆಗ ನಾನು ಬೇಡವೆಂದೆ .... ’

‘ ಈಗೇಕೆ ಬಿಡಿ ಆ ಹಳೆಯ ಮಾತು ’ ಅವಳ ಧ್ವನಿಯಲ್ಲಿ ವಿಷಣ್ಣತೆ ಇತ್ತು.

'ಬೇಕಾದದ್ದಕ್ಕೇ ಕೇಳುತ್ತಾ ಇರೋದು .... ಅವತ್ತಿಗೂ ಇವತ್ತಿಗೂ ಮತ್ತೆ ಇವತ್ತೆ ನಿನ್ನನ್ನು ನೋಡುತ್ತಿರುವುದು. ಅದಕ್ಕೇ ಕೇಳುತ್ತಿದೇನೆ. ಅದಕ್ಕಾಗಿ ನಿನಗೆ ನನ್ನ ಮೇಲೆ ಸಿಟ್ಟಿದೆಯೋ ಲಲಿತಾ.' ನೀರಸವಾಗಿ ಪ್ರಶ್ನೆ ಕೇಳಬೇಕೆಂದೂ, ಆ ಮಾತಿನಲ್ಲೇನೋ ಕಾತುರವಿತ್ತು – ಅವಳ ಉತ್ತರದ ಮೇಲೆ ನನ್ನ ಬದುಕು ಆಧಾರಪಟ್ಟ ಹಾಗೆ.

'ಸಿಟ್ಟೇಕೆ ಬರಬೇಕು ?'

'ನಾನು ನಿನ್ನನ್ನು ಬೇಡವೆಂದು ನಿರಾಕರಿಸಿದ್ದಕ್ಕೆ.'

'ನಾವು ಏನೇನೋ ಬೇಕು ಎಂದು ಬಯಸುತ್ತೇವೆ. ಬಯಸಿದ್ದೆಲ್ಲಾ ಸಿಗುತ್ತದೆಯೆ? ಹಾಗೆಂದು ಸಿಗದ್ದರ ಮೇಲೆಲ್ಲಾ ಸಿಟ್ಟುಮಾಡಿಕೊಳ್ಳಲಿಕ್ಕಾಗುತ್ತದೆಯೆ ?' ಅವಳ ಮಾತು, ನನಗೆ ಉತ್ತರ ಕೊಡುವುದಕ್ಕಿಂತ ಹೆಚ್ಚಾಗಿ ತನಗೇ ಹೇಳಿಕೊಳ್ಳುವಂತಿತ್ತು.

'ಅಂದರೆ – ನಿನ್ನ ಮಾತೇ ನನಗೆ ಅರ್ಥವಾಗಲಿಲ್ಲ.'

'ಹೋಗಲಿ ಬಿಡು. ಅರ್ಥವಾಗದಿದ್ದರೆ ನಷ್ಟವೇನೂ ಇಲ್ಲ. ಎಂದೋ ಆಗಿಹೋದದ್ದನ್ನು ಇಂದೇಕೆ ನೆನೆಸಿಕೊಳ್ಳಬೇಕು.'

ಅವಳ ಒಂದೊಂದು ಮಾತೂ, ಯಾವುದೋ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತಿತ್ತು.

'ಸ್ವಲ್ಪ ಬಿಡಿಸಿ ಅರ್ಥವಾಗುವ ಹಾಗೆ ಹೇಳು ಲಲಿತಾ.'

'ಏನು ಹೇಳಿದರೆ ತಾನೆ ಏನು ? ಕೈಮೀರಿದ್ದನ್ನು ನೆನೆಸಿಕೊಂಡೇಕೆ ಮರುಗಬೇಕು. ಇಂದು ಅದರ ಅಗತ್ಯವಾದರೂ ಏನಿದೆ ?'

'ಇದೆ ಲಲಿತಾ. ಇಂದು ನನ್ನದು. ಅದಕ್ಕೇ ನಾ ಕೇಳುತ್ತಿರುವುದು ?'

'ಎಂದಾದರೊಂದು ದಿನ ಹೇಳುತ್ತೇನೆ. ಇಂದಾಗದು.'

'ಇಂದೇ, ಈಗಲೇ ಹೇಳು.'

'ಹೇಳಲೇಬೇಕೇ ?' ಅವಳ ಧ್ವನಿಯಲ್ಲಿ ಹೆತ್ತ ತಾಯಿ, ಸತ್ತ ಮಗುವಿನ ಗೋರಿ ಅಗೆಯುವಾಗ ಇರುವಂಥ ಭೀತಿ ಇತ್ತು. ಅವಳ ಮಾತು ನನ್ನನ್ನು ಕಾತುರಗೊಳಿಸಿತು.

'ಹೂ. ಹೇಳು ಲಲಿತಾ' ಎಂದೆ.

ನನ್ನ ಕೈಯಲಿದ್ದ, ತನ್ನ ಕೈಯನ್ನು ಬಿಡಿಸಿಕೊಂಡು, ಸ್ವಲ್ಪ ದೂರ ಸರಿದು ಹೇಳಿದಳು:

'ಅಂದು ತುಂಬಾ ದುಃಖಪಟ್ಟೆ.

'ಏಕೆ ?'

'ನಾನು ನಿನ್ನ ಕೈ ಹಿಡಿಯುವೆನೆಂದು ನೆಚ್ಚಿಕೊಂಡಿದ್ದೆ. ನೀನೇ ಬೇಡ ವೆಂದು ದೂಡಿಬಿಟ್ಟೆ. ನಾನೇನು ಮಾಡಲಿ ? ಹೆಣ್ಣು ಕಣ್ಣೀರಿಡುವುದಕ್ಕಿಂತ ಹೆಚ್ಚಿಗೆ ಏನು ಮಾಡಬಲ್ಲಳು ?'

ಲಲಿತಾ ನನ್ನನ್ನು ಬಯಸಿದ್ದಳು. ನಾನೇ ಬೇಡನೆಂದು ದೂಡಿದೆ. ನನ್ನ ತಲೆ ಸುತ್ತಲಾರಂಭಿಸಿತು, ಆ ಮಾತು ಕೇಳಿ. ಈಗ ಯಾರು ನನ್ನವ ಳಾಗಬೇಕೆಂದು, ನನ್ನೆದೆ ಬಯಸುತ್ತಿದೆಯೋ, ಅವಳು ನನ್ನನ್ನು ಬಯಸಿದ್ದಳು. ಈಗ....ಈಗ....

'ನನ್ನನ್ನು ನೆಚ್ಚಿದ್ದೆಯಾ ? ಏಕೆ ?'

'ನಿನಗೆ ಗೊತ್ತಿಲ್ಲ. ನಾವಿಬ್ಬರೂ ಮಗುವಾದಾಗಲಿನಿಂದ ಅಮ್ಮ ಅಪ್ಪಾ ಇಬ್ಬರೂ ನೀನೇ ನನ್ನ ಕೈ ಹಿಡಿಯುವವನು ಎನ್ನುತ್ತಿದ್ದರು. ನಿನ್ನನ್ನು ಕಂಡಾಗ ನನಗೂ 'ನೀನೇ ಸಾಕು' ಎನ್ನಿಸಿತು. ನಾನು ಬೆಳೆದ ಹಾಗೆ, ಅದೂ ಬೆಳೆಯಿತು. ಮೊದಮೊದಲು ಅಪ್ಪನಿಗೂ ನೀನು ಒಪ್ಪಲಿಕ್ಕಿಲ್ಲನೆಂಬ ಸಂದೇಹವಿತ್ತು. ಆದರೆ ಅಮ್ಮನಿಗೆ ನನ್ನ ಅಭಿಲಾಷೆ ಗೊತ್ತಿತ್ತು. ಅದಕ್ಕೇ ಅಪ್ಪನನ್ನು ಬಲವಂತಮಾಡಿ ಕಳಿಸಿದಳು. ಕಡೆಗೂ ಅಪ್ಪನ ಸಂದೇಹವೇ ನಿಜವಾಯಿತು. ನೀನು ಬೇಡವೆಂದೆ. ಯತ್ನವಿಲ್ಲದೆ ಬೇರೆ ಕಡೆ ಪ್ರಯತ್ನ ಮಾಡಿದರು....' ಮಾತು ಅವಳ ಬಾಯಿಂದ ಬಳ್ಳಿಯ ಗೆಂಟೆಯಿಂದ ಹೂವ ರಳುವಷ್ಟು ಸಹಜವಾಗಿ ಬರುತ್ತಿತ್ತು.

'ಈಗ ?'

'ಏನೀಗ ?'

'ಈಗ ನನ್ನನ್ನು ಕಂಡರೆ ನಿನಗೆ ಅಸಹ್ಯವೇ ಲಲಿತಾ'

'ಊಹೂ. ಇಲ್ಲ.'

'ಮೊದಲಿನ ಹಾಗೇ ಪ್ರೀತಿ ಇದೆಯೆ ?'

'ಪ್ರೀತಿ ಇದೆ. ಮೊದಲಿನ ಹಾಗಲ್ಲ.'

'ಮತ್ತೆ ಹೇಗೆ ?'

'ಹೇಗೋ ನಾನು ವಿವರಿಸಲಾರೆ.'

'ನಾನೀಗ ಬೇಕು ಎನ್ನಿಸುವುದಿಲ್ಲವೇ ?'

'ಇಲ್ಲ.'

'ಹಾಗಾದರೇಕೆ ಪ್ರೀತಿಸುತ್ತೀಯ ?'

'ಮುಂದಿನ ಜನ್ಮದಲ್ಲಾದರೂ ನೀನು ನನ್ನವನಾಗಬಹುದೆಂದು.

ಬ್ಬಾ! ಲಲಿತಾ ಇನ್ನೂ ನನ್ನನ್ನು ಪ್ರೀತಿಸುತ್ತಿದಾಳೆ. ಮುಂದಿನ ಜನುಮಕ್ಕಾದರೂ ಅವಳವನಾಗಬಹುದೆಂದು ಪ್ರೀತಿಸುತ್ತಿದಾಳೆ....

'ಲಲಿತಾ. ಪಾಪಕ್ಕೆ ಪಶ್ಚಾತ್ತಾಪವಿಲ್ಲವೇ ?'

'ಪಶ್ಚಾತ್ತಾಪವಿದೆಯೊ ಇಲ್ಲವೋ ಪ್ರಾಯಶ್ಚಿತ್ತವಂತೂ ಇದೆ.'

ಅವಳ ಮಾತು ನನಗೆ ಅರ್ಥವಾಗಲಿಲ್ಲ. ಒಂಟಿ ಜಾಡು ಹಿಡಿದು ಕುರುಡಾಗಿ ನಡೆದಿತ್ತು ನನ್ನ ಮನಸು.

'ನೋಡು ಲಲಿತಾ. ಅಂದು ನಾನು ತಪ್ಪು ಮಾಡಿದೆ. ಇಂದು ಅದರ ಅರಿವಾಗುತ್ತಿದೆ. ಈಗ ನನಗೆ ನೀನಿಲ್ಲದೆ ಬದುಕಲಾರೆ ಎನ್ನಿಸುತ್ತಿದೆ. ಹೇಳು ಲಲಿತಾ ಈಗ ನೀನು ನನ್ನವಳಾಗಲಾರೆಯಾ? ಬೇಕಾದ ಬಲಿ ಕೊಡಲು ಸಿದ್ಧವಾಗಿದ್ದೇನೆ ಅಂದಿನ ತಪ್ಪಿಗೆ. ಹೇಳು ನನ್ನವಳಾಗಲಾರೆಯಾ?'

ಯಾವುದೋ ಹುಚ್ಚು ಹೊಳೆ ನನ್ನನ್ನು ಸೆಳೆದೊಯ್ದಿತ್ತು. ನನ್ನ ಮಾತು ಕೇಳಕೇಳುತ್ತ ಅವಳ ಮೈ ಕಂಪಿಸಲಾರಂಭಿಸಿತು.

'ಇಲ್ಲ' ಮೈ ಕಂಪಿಸುತ್ತಿದ್ದರೂ, ಮಾತು ನಿರ್ಧಾರವಾಗಿ ಬಂತು.

'ಏಕೆ ? ಲಲಿತಾ ಏಕೆ ?'

'ನಾನು ನನ್ನವಳಲ್ಲ ಇಂದು ನಾನು ಬೇರೆಯವರವಳು. ನಾನೆಷ್ಟು ಬಯಸಿದರೂ, ನೀನು ಈ ಜನುಮದಲ್ಲಿ ನನ್ನವನಾಗಲಾರೆ; ನಾನೂ ಅಷ್ಟೆ. ಅದೇ ನಾವು ಕೊಡಬೇಕಾದ ಬಲಿ! ಈ ಜನುಮದಲ್ಲಿನ್ನು ನೀನು ನನಗೇನೂ ಅಲ್ಲ, ನಾನು ನಿನಗೇನೂ ಅಲ್ಲ. ಆಗಲಾರೆ, ಆಗಲಾರೆ.' ಯಾವುದೋ ಭಾವದ ಹೊಳೆಯ ಪ್ರವಾಹದಲ್ಲಿ ಕೊಚ್ಚಿಬರುತ್ತಿತ್ತು ಅವಳ ಮಾತು.

'ಹಾಗಾಗದು. ನೀನಿಲ್ಲದೆ ನಾ ಬದುಕಲಾರೆ ಲಲಿತಾ. ಈ ಜನುಮದಲ್ಲೊಂದು ಬಾರಿ ತಿದ್ದಿಕೊಳ್ಳಲು ಅವಕಾಶ ಕೊಡು.'

'ನಾನೇನು ಮಾಡಬಲ್ಲೆ. ದೈವೇಚ್ಛೆ.'

'ದೇವರೂ ಇಲ್ಲ, ಏನೂ ಇಲ್ಲ. ಎಲ್ಲಾ ನಿನ್ನ ಕೈಯಲ್ಲಿದೆ ಹೇಳು, ನಿನ್ನಾಣೆ, ನನ್ನಾಣೆ, ನೀನಿಲ್ಲದೆ ನಾನಿರಲಾರೆ.'

'ಏಕೆ ? ಇಷ್ಟು ದಿನ ಇರಲಿಲ್ಲವೇ ? ನಾನಿಲ್ಲವೇ ?' ಕಟುವಾಗಿ ಚಾಟಿಯಿಂದ ಹೊಡೆವಂತೆ ಬಂತು ಮಾತು. ಬೇರೆ ಹೆಣ್ಣಿನ ಬಾಯಿಂದ ಈ ಮಾತು ಬಂದಿದ್ದರೆ ಏನು ಮಾಡುತ್ತಿದ್ದೆನೊ. ಆದರೆ ಅವಳಿದಿರು ನಾನೇನೂ ಹೇಳಲಾರದಾದೆ.

'ಇಷ್ಟು ದಿನ ಇದ್ದೆ. ಇನ್ನು ಇರಲಾರೆ. ಇಂದು ನಿನ್ನಲ್ಲಿ ನೆಟ್ಟಿಕೊಂಡಿದೆ, ಇಷ್ಟು ದಿನ ಹತ್ತಾರು ಕಡೆ ಹಾರಿದ ಮನಸು ! ನಿನ್ನನ್ನು ನಾನು ಪ್ರೀತಿಸಿದೇನೆ ಲಲಿತಾ.'

'ನಾನು ನಿನ್ನವಳಾಗದೆ ಹೋದರೂ ಪ್ರೀತಿಸಬಾರದೆ ?'

'ಹೇಗೆ ?'

'ಪ್ರೀತಿಗೆ ಮೈ ಮುಖ್ಯವಲ್ಲ, ಮನಸು.'

ಅವಳ ಮಾತು ನನಗೆ ಅರ್ಥವಾಗಲಿಲ್ಲ.

'ಅದಾವುದೂ ನನಗೆ ಅರ್ಥವಾಗುವುದಿಲ್ಲ. ಲಲಿತಾ ನನಗೆ ನೀನು ಬೇಕು.'

'ನನ್ನ ಹೃದಯ ನಿನ್ನದೆ. ಎಂದೂ ನಿನ್ನದೆ ಆಗಿತ್ತು. ಅಷ್ಟು ಸಾಲದೆ ?' ಅವಳ ಮಾತಿನಲ್ಲಿ ಅನಂತ ಸಹನೆಯಿತ್ತು.

'ಹೃದಯ—ಮೈ ಇದಾವುದೂ ನನಗೆ ಗೊತ್ತಾಗದು. ನನಗೆ ನೀನು ಬೇಕು. ನಿನ್ನ ಹೃದಯ, ಮೈ,, ನಿನ್ನ ಒಂದೊಂದು ಅಣುವೂ ಬೇಕು. ಹೇಳು ಲಲಿತಾ ನೀನು ಸಂಪೂರ್ಣವಾಗಿ ನನ್ನವಳಾಗಲಾರೆಯಾ ?'

'ಇಲ್ಲ' ಎಂದು ಎದ್ದು ನಿಂತು ಹೋಗಲನುವಾದಳು ಲಲಿತಾ. ನಿಂತ ಅವಳ ಮೈ ನಡುಗುತ್ತಿತ್ತು.

'ಲಲಿತಾ ........'

'ಇಲ್ಲ. ಈ ಜನುಮದಲ್ಲಿ ಸಾಧ್ಯವಿಲ್ಲ' ಎಂದವಳೇ ತೂರಾಡುತ್ತಾ ವೇಗವಾಗಿ ಹೊರಟುಹೋದಳು.

ಇದ್ದಕ್ಕಿದ್ದ ಹಾಗೆ ಜೀವನವೇ ಬರಿದಾಗಿ ಹೋದ ಹಾಗಾಯಿತು. ಹಳದಿಯ ದೀಪ ಬೆಕೋ ಎನ್ನುತ್ತಿತ್ತು. ಮನ ಬರಿದು, ಮನೆ ಬರಿದು, ಎದೆ ಬರಿದು, ಜಗತ್ತೆ ಬರಿದು. ಹಂಚಿನ ಮೇಲೆ ಮಳೆ ಬೀಳುವ ಸದ್ದಾಗುತ್ತಿತ್ತು. ಮುಗಿಲು ಕಣ್ಣೀರಿಡುತ್ತಿರಬೇಕು.

ಏನು ಮಾಡಲಿ, ಏನು ಮಾಡಲಿ ........

ಅವಳು ಈ ಜನುಮದಲ್ಲಿ ನನ್ನವಳಾಗುವುದಿಲ್ಲವೆಂಬುದು ಖಂಡಿತವಾದ ಮೇಲೂ ಬದುಕಿರಲೆ? ಅವಳು ಇಲ್ಲವೆಂದ ಮೇಲೆ ನನ್ನೆದೆಯ ಬಯಕೆ ಬೃಹದಾಕಾರವಾಗಿ ಬೆಳೆದು, ಕಾಳ್ಗಿಚ್ಚಾಗಿ ಸುಡಲಾರಂಭಿಸಿತು. ಬದುಕು ದುರ್ಭರವಾಗುತ್ತಿತ್ತು; ಗಳಿಗೆ ಗಳಿಗೆಗೆ ಅಸಹ್ಯವಾಗುತ್ತಿತ್ತು. ಬದುಕಿರುವಷ್ಟು ದಿನವೂ ಎದೆಯಲ್ಲಿ ಈ ಚಿತೆಯುರಿಯನ್ನು ಹೊತ್ತೇ ಬದುಕಬೇಕೇ? ಎಂದೂ ನಿರಾಶನಾಗದ ನನಗೆ ಅಂದು ಬಾಳಿನ ಜೀವರಸವೇ ಬತ್ತಿ ಹೋಗಿತ್ತು. ಅತೃಪ್ತ ಬಯಕೆ, ನಿಶ್ಚಿತ ನಿತ್ಯನಿರಾಶೆ........ಆ ಗಳಿಗೆಯಲ್ಲಿ ನನಗೆ, ನನ್ನ ನಿರಾಕರಣೆಯಿಂದ ಲಲಿತೆಯ ಮೃದುಜೀವಕ್ಕೆ ಎಂಥ ನೋವಾಗಿರಬೇಕೆಂಬ ಅರಿವಾಯಿತು. ಆ ಅರಿವು ಬೆಳೆದ ಹಾಗೇ ನನ್ನ ಮೇಲೇ ನನಗೆ ಹೇಸಿಗೆಯೂ ಬೆಳೆಯಿತು. ಛಿ! ಈ ಬಾಳು ಬದುಕಿ ಉಪಯೋಗವಿಲ್ಲವೆನ್ನಿಸಿತು. ಇನ್ನೊಮ್ಮೆ ಕೇಳಿ ನೋಡಲೆ? ಏನು ಫಲ. ಮತ್ತೆ ಮತ್ತೆ ಈ ಮಾತಾಡಿ, ಅವಳೆದೆಯನ್ನಿರಿಯಲೇ....

ಹಾಗಾದರೇನು ಮಾಡಲಿ, ಮುಂದೇನು ದಾರಿ........

ಮೌನ ತುಂಬಿದ ಮನೆ ನನ್ನನ್ನು ಹೊರಗಟ್ಟುತ್ತಿದ್ದ ಹಾಗಿತ್ತು. ಒಂದು ಗಳಿಗೆಯೂ ಅಲ್ಲಿರಲಾರೆ ಎನ್ನಿಸಿತು. ಹೊರಟುಹೋಗಬೇಕು, ಆಗಲೇ, ಆ ಗಳಿಗೆಯೇ. ಎಲ್ಲಿಗಾದರೂ ಸರಿ. ಎಲ್ಲಾದರೂ ಹೋಗಿ ಸಾವಿನ ತೋಳಲ್ಲಿ, ಈ ಮುಖ ಮರೆಸಿಕೊಳ್ಳಬೇಕು........

ಮರುದಿನ ಮನೆಗೆ ಬಂದಾಗ, ನಾನು ಹೀಗೆ ಹೋದೆನೆಂದು ತಿಳಿದು ಸೋದರಮಾವ ಏನೆಂದುಕೊಳ್ಳಬಹುದು? ಲಲಿತಾ ಅವರಿಗೆ ನಡೆದುದನ್ನೆಲ್ಲಾ ಹೇಳಬಹುದು. ಅವಳು ಏನಾದರೂ ಹೇಳಲಿ, ಅವರೇನಾದರೂ ಅಂದು

ಕೊಳ್ಳಲಿ.... ಯಾರೇನೆಂದುಕೊಂಡರೆ ನನಗೇನು ನಷ್ಟ. ಏನಿದೆ ಇನ್ನು ಕಳೆದುಕೊಳ್ಳಲು. ನನ್ನ ಬಾಳಿನಲ್ಲೊಂದು ಬಾರಿ ಪ್ರೇಮದ ಇರವನ್ನು ಕಂಡು ಕೊಂಡೆ ನಿರಾಶನಾಗಲು. ಇನ್ನೇನು ಬೇಕು? ಇನ್ನೇನಾದೀತು ........

ಸರಿ, ಹೊರಟುಬಿಡುವುದೇ ಸರಿ ........

ಎಷ್ಟು ಹೊತ್ತು ಹೀಗೆ ಯೋಚಿಸುತ್ತಿದ್ದೆನೊ. ಈ ನಿರ್ಧಾರಕ್ಕೆ ಬಂದ ಕೂಡಲೇ ದಿಕ್ಕುಗಾಣದೆ ತೊಳಲುತ್ತಿದ್ದ ಮನಸಿಗೊಂದು ಗುರಿ ಕಂಡಹಾಗಾಯಿತು. ಪಟಕ್ಕನೆ ಎದ್ದು ನಿಂತೆ. ಮೈ ಝೋಲಿ ಹೊಡೆಯುತ್ತಿತ್ತು. ಹಾಗೇ ಬಾಗಿಲ ಕಡೆ ಹೆಜ್ಜೆ ಹಾಕಿದೆ. ತಲೆ ಸುತ್ತಿಕೊಂಡು ಬಂತು. ಏನನ್ನಾದರೂ ಹಿಡಿದುಕೊಳ್ಳಲೆಂದು ನೋಡಿದೆ. ಪಕ್ಕದಲ್ಲೇನೂ ಇರಲಿಲ್ಲ. ಗೋಡೆಯತ್ತ ಸರಿಯೋಣವೆಂದು ಪಕ್ಕಕ್ಕೆ ಹೆಜ್ಜೆ ಹಾಕಿದೆ. ಕೊಚ್ಚಿಬಂತು ಝೋಲಿ. ಯತ್ನಮೀರಿ ಕೆಳಗುರುಳಿದೆ.

ಬಿದ್ದ ಸದ್ದು ಕೇಳಿ ಅಡುಗೆಯ ಮನೆಯೊಳಗಿನಿಂದ ಲಲಿತಾ ಓಡಿ ಬಂದಳು.

ಬಂದರೆ ಬರಲೇಳು. ಹಾಗೇ ಮೇಲೆದ್ದು ನಿಂತು, ಗೋಡೆಗೆ ಊರಿ ಕೊಂಡು ಬಾಗಿಲಕಡೆ ಹೆಜ್ಜೆ ಹಾಕಿದೆ. ನನ್ನ ಕಣ್ಣು ಕುರುಡಾಗುತ್ತಿತ್ತು. ಅದೇ ಬಾಗಿಲು. ಲಲಿತಾ ಏನೋ ಕೇಳಿದಳು. ನನಗೇನೂ ಕೇಳಿಸದು. ಹೊರಗೆ ಮಳೆಯ ಸದ್ದು, ಗಾಳಿಯ ಮೊರೆತ.

ಲಲಿತಾ ಓಡಿಬಂದು ಬಾಗಿಲಿಗೆ ಅಡ್ಡ ನಿಂತಳು.

'ಎಲ್ಲಿಗೆ, ಎಲ್ಲಿಗೆ ಹೊರಟೆ?'

ಅವಳ ಮುಖ ದಿಟ್ಟಿಸಿ ನೋಡಿದೆ. ಕಣ್ಣೀರಲ್ಲಿ ತೊಯ್ದು ಹೋಗಿತ್ತು ಅವಳ ಮುಖ. ಇನ್ನೂ ಕಂಬನಿ ಹರಿಯುತ್ತಿದೆ.

'ಬಾಗಿಲು ಬಿಡು. ನಾ ಹೋಗಬೇಕು.'

'ಎಲ್ಲಿಗೆ?'

'ಎಲ್ಲಿಗಾದರೂ ಸರಿಯೇ. ಬಾಗಿಲು ಬಿಡು ನಾ ಹೋಗಬೇಕು.'

'ಏಕೆ ಹೋಗಬೇಕು?'

'ನಾನಿಲ್ಲಿರಲಾರೆ, ಸರಿ, ಬಾಗಿಲು ಬಿಡು. ನಾನೆಲ್ಲಿಗಾದರೂ ಹೊರಟು ಹೋಗುತ್ತೇನೆ.'

'ನೀನೀಗ ನಡೆಯಲಾರೆ. ಮಲಗಿಕೊ.'

'ಹೂ. ಮಲಗಲಿಕ್ಕೇ ಹೋಗುತ್ತಿದೇನೆ. ಮತ್ತೆಂದೂ ಏಳದಂತೆ ಮಲಗುತ್ತೇನೆ. ದಾರಿ ಬಿಡು ಲಲಿತಾ. ನಾ ನಿಲ್ಲಲಾರೆ. ಬಿಡು, ದಾರಿ ಬಿಟ್ಟು ನನ್ನನ್ನು ಬದುಕಿಸು.'

ನಿಲ್ಲಲಾರದೆ, ಮೈ ಮತ್ತೆ ಝೋಲು ಹೊಡೆದು ತೂಗುತ್ತಿದೆ. ಇನ್ನೊಂದು ಗಳಿಗೆ ನಿಂತರೆ ಮತ್ತೆ ಬೀಳುತ್ತೇನೆ ಎನ್ನಿಸಿತು. ಒಂದು ಕೈಯಲ್ಲಿ ಗೋಡೆ ಹಿಡಿದುಕೊಂಡು, ಇನ್ನೊಂದು ಕೈಯಿಂದ, ಅವಳನ್ನು ಎಳೆದು ಹೇಳಿದೆ.

'ದಾರಿ ಬಿಡು ನನಗೆ.'

ಅವಳ ಎದೆ ಬಿರಿದುಹೋಗುತ್ತಿರುವುದು ಕಾಣುತ್ತಿತ್ತು. ಮುಖ ದುಃಖವಿಹ್ವಲವಾಗಿ ವಿವರ್ಣವಾಗಿತ್ತು. ಆದರೆ ನಾನೇನು ಮಾಡಲಿ. ನಾನಲ್ಲಿ ಇರಲಾರೆ, ಅವಳಿಲ್ಲದ ಜಗತ್ತಿನಲ್ಲಿರಲಾರೆ.... ...

'ಇಲ್ಲ, ನಾನು ದಾರಿ ಬಿಡುವುದಿಲ್ಲ. ನೀನು ಹೀಗೆ ಎಲ್ಲಿಗೂ ಹೋಗಲಾರೆ.'

'ಹೀಗೆ ನಾನು ಇಲ್ಲಿಯೂ ಇರಲಾರೆ. ನನ್ನಾಣೆ ದಾರಿ ಬಿಡು ಲಲಿತಾ. ಎಲ್ಲಿಗಾದರೂ ಹೊರಟುಹೋಗುತ್ತೇನೆ.'

'ನನ್ನಾಣೆ. ನೀನಿಲ್ಲಿಂದ ಹೋಗಕೂಡದು. ನಿನ್ನಿಂದ ನಡೆಯುವುದಾಗದು.'

'ಏನಾದರಾಗಲಿ ಬಿಡು ಲಲಿತಾ. ಇಷ್ಟು ಸಾಯುವುದಕ್ಕಿಂತ, ಸತ್ತು ಬದುಕುವುದು ಮೇಲು.'

'ನನ್ನಾಣೆ. ಸಾಯುವ ಮಾತಾಡಬೇಡ. ನೀನೇಕೆ ಸಾಯಬೇಕು.'

'ನೀನಿಲ್ಲದೆ ನಾನು ಬದುಕಿರಲಾರೆ ಲಲಿತಾ. ಸತ್ತಾದರೂ ನಿನಗೆ ಕಾಯುತ್ತೇನೆ ಹೋಗಬಿಡು ನನ್ನ.'

'ಮತ್ತೆ ಸಾಯುವ ಮಾತೇ. ನನ್ನ ಮೇಲೆ ನಿನಗೆ ಪ್ರೀತಿ ಇಲ್ಲವೋ?'

'ಇದೆ ಲಲಿತಾ, ಅದಕ್ಕೇ ಸಾಯಬೇಕೆನಿಸಿದ್ದು.'

'ಬದುಕಿ ಪ್ರೀತಿಸಲಾರೆಯಾ ನನ್ನ.'

'ಬದುಕಲು ನೀನು ಬೇಕು, ನಿನ್ನ ಮೈ ಬೇಕು, ಎಲ್ಲವೂ ಬೇಕು. ಬೇರೆಯವರ ಮೇಲಾಗಿದ್ದರೆ ಬಲಾತ್ಕಾರ ಮಾಡುತ್ತಿದ್ದೆ ಲಲಿತಾ. ನಿನ್ನ

ಮೇಲೆ ನಾನು ಬಲಾತ್ಕಾರ ಮಾಡಲಾರೆ. ನೀನಿಲ್ಲದೆ ನಾನು ಬದುಕಿರಲೂ ಆರೆ.' ಮೈ ಹೇಗೆ ಹೇಗೋ ಎಳೆಯುತ್ತಿತ್ತು.

'ಈ ಹಾಳು ಮೈಯಿಲ್ಲದೆ ನೀನು ಬದುಕಲಾರೆಯಾ?' ಏನು ಆರ್ತತೆ ಅವಳ ಧ್ವನಿಯಲ್ಲಿ.

'ಇಲ್ಲ ಲಲಿತಾ. ಸುಳ್ಳಾಡಲಾರೆ. ನಿನ್ನನ್ನು ಬೇಡುವ ಅಧಿಕಾರವೂ ನನಗಿಲ್ಲ. ನನಗಿರುವುದೊಂದೇ – ಸಾಯುವ ಅಧಿಕಾರ.'

'ನೀನು ಸಾಯಕೂಡದು.'

'ನಾನು ಬದುಕಿರಲಾರೆ ಲಲಿತಾ.... ಬಿಡು, ದಾರಿ ಬಿಡು, ನಾ ನಿಲ್ಲ ಲಾರೆ, ದಾರಿ ಬಿಡು' ಕಾತರನಾಗಿ ಅರಚಿದೆ. ಕಣ್ಣು ಇಲ್ಲದ ಕತ್ತಲೆಯನ್ನು ಎಳೆದೆಳೆದು ನುಂಗುತ್ತಿತ್ತು. ಇನ್ನೊಂದು ಗಳಿಗೆಯೂ ನಾ ನಿಲ್ಲಲಾರೆನೆನಿಸಿತು– ಗಟ್ಟಿಯಾಗಿ ಅರಚಿದೆ 'ದಾರಿ ಬಿಡು ಲಲಿತಾ' ತಲೆ ಗರ್ರೆಂದು ತಿರುಗಿ ಜೋಲು ಹೊಡೆಯಿತು. ಕತ್ತಲು ತುಂಬಿಕೊಂಡು ಬಂತು.

ಜೋಲಿ ಹೊಡೆದೆ. ಛಾವಣಿ, ನೆಲ, ಬಾಗಿಲು, ನಿಂತ ಲಲಿತಾ, ನಾನೂ – ಎಲ್ಲವೂ ಸುತ್ತಿಕೊಂಡು ಬಂತು. ಹೊರಗೆ ಮೊರೆಯುವ ಗಾಳಿ ಮಳೆ ಮೈಯೊಳಗೇ ಮೊರೆಯುತ್ತಿವೆ. ಕತ್ತಲು ಸುಳಿಸುಳಿಯಾಗಿ ಸುತ್ತಿ ಎಲ್ಲವನ್ನೂ ಕಬಳಿಸುತ್ತಿದೆ.

'ದಾರಿ ಬಿಡು ಲಲಿತಾ' ಬಾಗಿಲಿಗೆಂದು ಕೈ ಚಾಚಿದೆ. ಬಾಗಿಲೇ ಎಳೆದುಕೊಂಡು ಬಿಟ್ಟಿತು. ಮೃದುವಾದ ಬಳ್ಳಿ ಮೈಗೆ ಸುತ್ತಿಕೊಂಡಂತಾ ಯಿತು........

ಎಚ್ಚರವಾದಾಗ ನೆಲದಮೇಲೆ ಮಲಗಿದ್ದೆ. ಹಣೆ ಒದ್ದೆಯಾಗಿತ್ತು ಹಣೆಯಮೇಲೆ ಮಳೆಯ ಹನಿ ಬಿದ್ದಂತಾಯಿತು. ಹಾಗೇ ತಲೆ ಎತ್ತಿ ನೋಡಿದೆ. ಲಲಿತಳ ಕಂಬನಿಗರೆವ ಕಣ್ಣು ಕಾಣಿಸಿತು. ನನ್ನ ತಲೆ ಅವಳ ತೊಡೆಯ ಮೇಲಿತ್ತು.

'ಲಲಿತಾ' ಎಂದೆ ನಿರ್ಜೀವ ಸ್ವರದಲ್ಲಿ.

ನನ್ನ ಮಾತು ಕೇಳಿದ ಕೂಡಲೇ ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿ ದಳು. ನನ್ನ ಕರುಳನ್ನು ಎಳೆದೆಳೆದು ಕೊಯ್ದು ಹಾಕುತ್ತಿದೆ ಅವಳ ಧ್ವನಿ. ಏನು ಮಾಡಲಿ. ಹಾಗೇ ಏಳಲು ಹೋದೆ.

ಬಿಕ್ಕುಬಿಕ್ಕುತ್ತಲೇ ಹೇಳಿದಳು ಲಲಿತಾ. ನನ್ನನ್ನು ಹಾಗೇ ಒತ್ತಿ ಹಿಡಿದು 'ನನ್ನಾಣೆ ನೀವೆಲ್ಲೂ ಹೋಗಕೂಡದು. ನಾನು ಈ ಗಳಿಗೆಯಿಂದ ನಿಮ್ಮವಳು. ಬೇಕಾದ್ದು ಮಾಡಿಬಿಡಿ. ಇಲ್ಲಿಂದ ಹೋಗಬೇಡಿ.'

ಇದೇನು ಕನಸೊ, ಭ್ರಾಂತಿಯೊ, ನಾನು ಬದುಕಿದೇನೆಯೆ? ಚಕಿತನಾಗಿ 'ಲಲಿತಾ' ಎಂದೆ.

'ಹೂ, ನಾನು ನಿಮ್ಮವಳು, ನಿಮ್ಮಾಣೆ ನಿಮ್ಮವಳು.'

ಹಾಗೇ ತೋಳು ಚಾಚಿ, ಲಲಿತಳನ್ನು ಎಳೆದುಕೊಂಡೆ. ಅವಳ ತೊಯ್ದ ಮುಖವನ್ನು, ನನ್ನ ಮುಖದ ಹತ್ತಿರ ಎಳೆದುಕೊಂಡು 'ನಿಜವೇ, ನಂಬಲೇ ಲಲಿತಾ' ಎಂದೆ.

ಏನೂ ಉತ್ತರ ಕೊಡದೆ, ತುಟಿಗೆ ತುಟಿ ತಗುಲಿಸಿದಳು. ಅವಳ ಹತ್ತಿರವಾದ ಎದೆಯ ಕಾವು ತಗುಲಿ ನನಗೆ ಹೊಸ ಜೀವ ಬಂದಂತಾಯಿತು.

'ಇಂದಿನಿಂದ ನೀನು ನನ್ನವಳು ಲಲಿತಾ. ನಾನು ಬದುಕಿದೆ' ಎಂದೆ.

'ಆದರೆ ನಾನು ....'

ಅವಳ ಮಾತು ನನಗೆ ಅರ್ಥವಾಗಲಿಲ್ಲ. ಅವಳ ಮೃದುವಾದ ತೋಳು ಹಿಡಿದು, ಅವಳನ್ನು ಪಕ್ಕಕ್ಕೆ ಎಳೆದುಕೊಂಡೆ.

ಅವಳನ್ನು ತೋಳಲ್ಲಿ ತಬ್ಬಿಕೊಂಡು ತುಟಿಗೆ ಮುತ್ತು ಕೊಡುತ್ತಾ 'ಇನ್ನು ನೀನು ನನ್ನವಳು. ಇನ್ನು ಯಾರವಳೂ ಅಲ್ಲ.'

'ನಿಜ. ಇನ್ನು ನಾನು ಯಾರವಳೂ ಆಗಲಾರೆ' ಎಂದಳು. ಅವಳ ಮಾತಿನಲ್ಲೇನೋ ಧ್ವನಿ ಇತ್ತು.

ನನಗವಳ ಮಾತು ಅರ್ಥವಾಗಲಿಲ್ಲ. ಬಂಗಾರದ ಬಳ್ಳಿಯ ಪಾರಿವಾಳದ ಮೈ ತೋಳೊಳಗೆ ಅಡಗಿರುವಾಗ, ಮಾತು ಅರ್ಥವಾದರೆಷ್ಟು ಬಿಟ್ಟರೆಷ್ಟು?

ಯಾವುದೋ ಕನಸಿನಲ್ಲೆಂಬಂತೆ ಆ ರಾತ್ರಿ ಕಳೆದುಹೋಯಿತು. ಮುಂದಿನ ಬಾಳಿಗೆ ಸಾವಿರ ಯೋಜನೆ ಹಾಕಿ, ಅವಳಿಂದ 'ಹೂ' ಎನ್ನಿಸಿಕೊಂಡೆ, ಮುತ್ತಿನ ಪ್ರಮಾಣ ತೆಗೆದುಕೊಂಡೆ. ಅವಳು ಗಂಡನ ಮನೆಗೆ ಹಿಂದಿರುಗಬಾರದು. ನಾನು ಊರಿಗೆ ಹೋಗಿ ಹಣದ ವ್ಯವಸ್ಥೆ ಮಾಡಿಕೊಂಡು, ಆದಷ್ಟು ಬೇಗ ಹಿಂದಿರುಗುತ್ತೇನೆ. ಆಮೇಲೆ ಇಬ್ಬರೂ ಎಲ್ಲಿ

ಗಾದರೂ ಹಾರಿಹೋಗುವುದು. ನನ್ನ ಹುಚ್ಚು ಮಾತಿಗೆಲ್ಲಾ ಹೂ ಎಂದು ನನ್ನನ್ನು ಮೆಚ್ಚಿಸಿದಳು ಲಲಿತಾ.

ಮಾರನೆಯ ದಿನ ಬೆಳಿಗ್ಗೆ ನನ್ನ ಜೀವನಕ್ಕೊಂದು ಹೊಸ ಮೊನೆ ಬಂದಿತ್ತು. ಪ್ರೇಮಗಂಗೆಯಲ್ಲಿ ಸ್ನಾನಮಾಡಿ, ಹಳತೆಲ್ಲಾ ತೊಳೆದುಹೋಗಿ ಹೊಸಬನಾಗಿದ್ದೆ. ಮನಸಿಗೆ ಏನೋ ಒಂದು ತೃಪ್ತಿ, ಶಾಂತಿ ಬಂದಿತ್ತು.

ಆದರೆ ಲಲಿತಾ ವಿಚಿತ್ರವಾಗಿದ್ದಳು. ನನ್ನ ಮುಖ ನೋಡಿದ ಕೂಡಲೇ ವಿಷಾದ ಪೂರಿತ ನಗು ಅವಳ ಮುಖದ ಮೇಲೆ ಮಿನುಗುತ್ತಿತ್ತು.

'ಏಕೆ ಮೈಯಲ್ಲಿ ಚೆನ್ನಾಗಿಲ್ಲವೇ ಲಲಿತಾ' ಎಂದೆ.

'ಇಲ್ಲ. ಸ್ವಲ್ಪ ತಲೆ ನೋವು' ಎಂದಳು ಭಾರವಾದ ಸ್ವರದಲ್ಲಿ, 'ಮೈ ಮೈಲಿಗೆಯಾಗಿದೆ. ತೊಳೆದುಕೊಂಡರೆ ಸರಿಯಾಗುತ್ತದೆ' ಎಂದಳು.

ಅವಳನ್ನು ತಬ್ಬಿಕೊಂಡು, ಕೆದರಿದ ಕೂದಲನ್ನು ಮುತ್ತಿಟ್ಟು 'ಸರಿ' ಎಂದೆ, ಅವಳ ಮಾತು ಅರ್ಥವಾಗದಿದ್ದರೂ. ಲಲಿತಾ ತೋಳ ಸೆರೆಯಿಂದ ಜಾರಿ, ಸ್ನಾನದ ಮನೆಯ ಕಡೆ ಹೋದಳು.

ಆ ಗಳಿಗೆಯಿಂದ ನನಗೆ ಒಂದೇ ಯೋಚನೆ. ಯಾವಾಗ ಇಲ್ಲಿಂದ ಹೋಗಿ, ಹಣ ಜೊತೆಮಾಡಿಕೊಂಡು ಬಂದು ಇವಳನ್ನು ಇಲ್ಲಿಂದ ಕರೆದುಕೊಂಡು ಹೋದೇನೋ, ಹಗಲು, ರಾತ್ರಿ ನಾವಿಬ್ಬರೂ ಇಡೀ ಜೀವಮಾನವನ್ನೇ ಒಬ್ಬರೊಬ್ಬರ ತೋಳಿನಲ್ಲಿ ಮಲಗಿ ಕಳೆವ ದಿನ ಎಂದು ಬರುತ್ತದೆಯೋ ಎಂದು.

ಲಲಿತಳಿಗೂ ಮತ್ತೊಮ್ಮೆ ಅದನ್ನು ಹೇಳಿ, ಅವಳ ಒಪ್ಪಿಗೆ ಪಡೆದೆ.

ಸೋದರಮಾವ ಊರಿಗೆ ಬಂದ ಕೂಡಲೇ, 'ಜ್ವರ ಇಳಿದಿದೆ. ಕೂಡಲೇ ಊರಿಗೆ ಹೊರಡಬೇಕು. ತುಂಬಾ ಅವಸರದ ಕೆಲಸವಿದೆ' ಎಂದು ಹೇಳಿ, ಅವರು ಬೇಡಬೇಡವೆಂದರೂ ಹೊರಡುವ ಸಿದ್ಧತೆ ಮಾಡಿದೆ.

ಅವರೂ ನಿರುಪಾಯರಾಗಿ ಮರುದಿನ ಬೆಳಿಗ್ಗೆ ಬಸ್ಸಿಗೆ ಹೇಳಿಬರಲು ಹೋದರು.

ಲಲಿತಾ ಒಳಗಿದ್ದವಳು 'ಸ್ವಲ್ಪ ಒಳಗೆ ಬನ್ನಿ' ಎಂದಳು. ಒಳಗೆ ಹೋದೆ. ಅವಳ ಕಣ್ಣೆರಡೂ ಕಣ್ಣೀರಿನ ಕೊಳವಾಗಿತ್ತು.

ಮನೆಯಲ್ಲಿ ಯಾರೂ ಇರದ್ದರಿಂದ, ಅವಳನ್ನು ತಬ್ಬಿಕೊಂಡು, ತುಟಿ

ಯಿಂದ ಅವಳ ಕಂಬನಿಯನ್ನೊರೆಸಿ 'ಬೇಗ ಬಂದುಬಿಡುತ್ತೇನೆ, ಲಲಿತಾ' ಎಂದೆ.

'ಎಂದು ಬರುತ್ತೀರೋ ಏನೋ ಮತ್ತಾವಾಗ ನೋಡುವುದೋ' ಎಂದು ತುಟಿ ಚಾಚಿದಳು.

ಅವಳ ಎದೆಯನ್ನು ಬಿಗಿದುಕೊಂಡು ಮುತ್ತು ಕೊಟ್ಟೆ. ಅವಳೂ ಪ್ರತಿಚುಂಬನ ಕೊಟ್ಟು ತೋಳಿನಿಂದ ತಪ್ಪಿಸಿಕೊಂಡು ಹೊರಟುಹೋದವಳು, ಮತ್ತೆ ಹೊರಡುವಾಗ ಕೂಡ ಕಣ್ಣಿಗೆ ಬೀಳಲಿಲ್ಲ.

ಹೊರಡುವ ಮುನ್ನ ಅವಳಿಗಾಗಿ ನನ್ನ ಕಣ್ಣು ಹುಡುಕುತ್ತಿತ್ತು. ಅವರ ಅರ್ಥ ಅರಿತು ಸೋದರಮಾವನ 'ಪೆದ್ದ ಹುಚ್ಚು ಹುಡುಗಿ. ಒಳಗೆ ಅಳುತ್ತಾ ಮಲಗಿಬಿಟ್ಟಿದಾಳೆ. ಯಾರನ್ನಾದರೂ ಅಷ್ಟೆ. ಬಹು ಬೇಗ ಮನಸಿಗೆ ಹಚ್ಚಿಕೊಂಡು ಬಿಡುತ್ತಾಳೆ' ಎಂದ ನಗುತ್ತಾ.

ನಾನೇನೂ ಉತ್ತರ ಹೇಳದೆ ಹೊರಟು, ಅಷ್ಟು ದೂರ ಹೋಗಿ ಮತ್ತೆ ಹಿಂತಿರುಗಿ ನೋಡಿದೆ. ಕಿಟಕಿಯಲ್ಲಿ ನಿಂತು ನನ್ನತ್ತಲೇ ನೋಡುತ್ತಿದ್ದಳು. ನಾನು ಹಿಂದಿರುಗುವವರೆಗೂ ಹಾಗೇ ಕಾದಿರುತ್ತಾಳೋ ಏನೋ.'

* * * *

ಊರಿಗೆ ಬಂದವನೇ ಆದಷ್ಟು ಬೇಗ ಹಣ ಕೂಡಿಸತೊಡಗಿದೆ. ಕಿಟಕಿಯಲ್ಲಿ ನಿಂತ ಅವಳ ಮುಖದ ನೆನಪು 'ಬೇಗ, ಬೇಗ' ಎನ್ನುತ್ತಿತ್ತು. ಎಷ್ಟು ಬೇಗ ಬೇಗ ಎಂದರೂ ಮೂರು ನಾಲ್ಕು ದಿನವಾಗಿ ಹೋಯಿತು, ಅಷ್ಟಿಷ್ಟಾದರೂ ಹಣ ಕೈಗೆ ಬರಲು.

ನಾಲ್ಕನೆಯ ದಿನ ಮಧ್ಯಾಹ್ನ ಪೋಸ್ಟಿನಲ್ಲಿ ಎರಡು ಕಾಗದ ಬಂತು. ಎಲ್ಲಿಯದೋ ಎಂದು ಅಂಚೆ ಮುದ್ರೆ ನೋಡಿದೆ. ಎರಡೂ ಸೋದರಮಾವನ ಊರಿನಿಂದ ಬಂದವು. ಕೂಡಲೇ ಒಂದು ಲಲಿತೆಯದು, ಒಂದು ಸೋದರಮಾವನದು ಎಂದು ಅರ್ಥವಾಯಿತು. ಲಲಿತಾ ಏನು ಬರೆದಿದಾಳೋ ಎಂದು ಕಾತುರತೆ ಮೂಡಿತು. ಹಾಗೆ ಮನಸ್ಸಿನಲ್ಲಿ ಏಕೋ ಅಶುಭ ಸೋತ ಕವಿಯುತ್ತಿತ್ತು. ಅವಳ ಕಾಗದವನ್ನು ಕಡೆಗೆ ಓದೋಣವೆಂದು, ತೆಗೆದು [illegible]ಲ್ಲಿಟ್ಟುಕೊಂಡು, ಮೊದಲು ಸೋದರಮಾವನ ಕಾಗದ ಒಡೆದು ಓದಿದೆ. ಅದರಲ್ಲಿದ್ದುದಿಷ್ಟೆ :

**ಚಿರಂಜೀವಿಗೆ ಆಶೀರ್ವಾದಗಳು.**

ನಿನ್ನೆ ದಿನ ಬಟ್ಟೆ ಒಗೆಯಲು, ಕೊಳಕ್ಕೆ ಹೋದ ಚಿರಂಜೀವಿ ಸೌಭಾಗ್ಯವತಿ ಲಲಿತಾ, ಕಾಲು ಜಾರಿ ಕೊಳಕ್ಕೆ ಬಿದ್ದಳು. ಯಾರೋ ಕಂಡವರು ಮೇಲೆ ತೆಗೆಯುವಷ್ಟರಲ್ಲಿ ಜೀವ ಹೋಗಿತ್ತು. ವೃದ್ಧಾಪ್ಯದಲ್ಲಿ ನನಗೀ ದುಃಖವನ್ನು ವಿಧಿ ಹಣೆಯಲ್ಲಿ ಬರೆದಿತ್ತು. ದೈವೇಚ್ಛೆಗೆ ಉಪಾಯವಿಲ್ಲ. ಅಕ್ಕನಿಗೆ ಈ ವಿಚಾರ ತಿಳಿಸು.

ಹೆಚ್ಚೇನು ಬರೆಯಲಿ.

ಇಂತೀ ಆಶೀರ್ವಾದ.

ಕಾಗದವನ್ನೋದುತ್ತಿದ್ದ ಹಾಗೇ, ಕಾಣದ ಕಡೆಯಿಂದ ಸಿಡಿಲೆರಗಿದಂತಾಯಿತು ನನ್ನ ತಲೆಯಮೇಲೆ. 'ಅಪ್ಪಾ' ಎಂದು ಕೂಗಿ ಬಿದ್ದುಬಿಟ್ಟೆ.

ಎಚ್ಚರವಾದಾಗ ಹಾಸಿಗೆಯ ಮೇಲಿದ್ದೆ. ಅಮ್ಮ ತಣ್ಣೀರು ತಟ್ಟುತ್ತಿದ್ದಳು. ಅವಳ ಕಣ್ಣೀರು ಹರಿದು ಕರೆಗಟ್ಟಿದ ಮುಖ ನೋಡಿ, ಅವಳಿಗೆ ಸುದ್ದಿ ತಿಳಿದಿದೆ ಎಂದು ಗೊತ್ತಾಯಿತು. ಬಿಕ್ಕಿಬಿಕ್ಕಿ ಅಳಲಾರಂಭಿಸಿದೆ.

ಅಮ್ಮ ಮೌನವಾಗಿ ನನ್ನ ಮುಖ ನೋಡಿ, ಕಣ್ಣೀರು ಒರೆಸಿಕೊಳ್ಳುತ್ತಾ ಹೊರಟುಹೋದಳು.

ಹಾಗೇ ಎಷ್ಟು ಹೊತ್ತು ಅಳುತ್ತಾ ಮಲಗಿದ್ದೆನೊ. ಕಂಬನಿಯೊಡನೆ ನನ್ನ ಜೀವವೇ ಹರಿದುಹೋಗಿತ್ತು. ಜಗತ್ತೇ ನಿರ್ಜನ ಸ್ಮಶಾನವಾಗಿತ್ತು ನನ್ನ ಪಾಲಿಗೆ. ಯೋಚಿಸಲು ಕೂಡಾ ಮತಿ ಮುಸಣಿಸಿ ಹೋಗಿತ್ತು.

ಲಲಿತಾ ಬರೆದ ಕಾಗದವನ್ನು ಇನ್ನೂ ಓದಿರಲಿಲ್ಲ. ಅದು ಅಲ್ಲೇ ಇತ್ತು. ಯಾರೂ ಒಡೆದಿರಲಿಲ್ಲ.

ನಿರ್ಜೀವವಾದ ಕೈಯಿಂದ ಅದನ್ನು ಒಡೆದು ಒಳಗಿದ್ದ ಕಾಗದ ತೆಗೆದೆ. ಏನು ಆಶೆಗಳಿವೆಯೊ ಆ ಕಾಗದದಲ್ಲಿ, ಏನೇನು ಬಯಕೆಗಳಿವೆಯೊ, ಒಲವಿನ ಆಕಾಂಕ್ಷೆಗಳಿವೆಯೊ. ಕಂಬನಿ ತುಂಬಿದ ಕಣ್ಣಿನಿಂದ ಓದಿದೆ, ಲಲಿತಳ ಕಡೆಯ ಕಾಗದವನ್ನು. ನಾಲ್ಕಾರು ಸಾಲಿನ ಕಾಗದ:

ಪ್ರಿಯರಿಗೆ—

ಈ ಕಾಗದ ನೀವು ಓದುವಾಗ ನೀವೆಲ್ಲೋ, ನಾನೆಲ್ಲೋ. ನಾನು ಬದುಕಿರಲಾರೆ. ಈ ಮೈಲಿಗೆ ಮೈಗೆ ಪ್ರಾಯಶ್ಚಿತ್ತ ಮಾಡಬೇಕು. ಆದರೆ

ನನಗೇನಾದರೂ ಆಯಿತೆಂದು ಕೇಳಿ, ನೀವು ನಿಮ್ಮ ಜೀವಕ್ಕೆ ಅಪಾಯ ಮಾಡಿಕೊಳ್ಳಬಾರದು. ನನ್ನಾಣೆ, ನಮ್ಮಿಬ್ಬರ ಒಲವಿನ ಆಣೆ.

ನಿಮಗೆ ನನ್ನ ಮೇಲೆ ನಿಜವಾಗಿಯೂ ಪ್ರೀತಿ ಇದ್ದರೆ ನನ್ನ ಈ ಕಡೆಯ ಮಾತು ನಡೆಸಿಕೊಡಿ. ನೀವು ಸುಖವಾಗಿರಬೇಕೆಂಬುದೇ ನನ್ನ ಬಯಕೆ.

ಮುಂದಿನ ಜನುಮದಲ್ಲಾದರೂ ನಿಶ್ಚಯವಾಗಿ ನಿಮ್ಮವಳಾಗುತ್ತೇನೆ; ಈ ಜನುಮಕ್ಕೆ ಆ ಭಾಗ್ಯ ಬರಲಿಲ್ಲ. ನಿಮ್ಮನ್ನೆ ನೆನಸುತ್ತ ಕಣ್ಣುಮುಚ್ಚುತ್ತೇನೆ.

ಮತ್ತೊಮ್ಮೆ ನಿಮ್ಮ ಕಾಲು ಹಿಡಿದು ಬೇಡುತ್ತೇನೆ: ನಿಮ್ಮ ಜೀವಕ್ಕೆ ನೀವೇನೂ ಅಪಾಯ ತಂದುಕೊಳ್ಳಕೂಡದು.

ಇತಿ ನಿಮ್ಮ ಪ್ರೀತಿಯ,
ಲಲಿತಾ.

ಆ ಕಾಗದವನ್ನೋದಿ ನನಗೆ ಹುಚ್ಚು ಹಿಡಿದಂತಾಯಿತು. ಬಿಕ್ಕಿ ಬಿಕ್ಕಿ ಅತ್ತೆ. ಆ ಕಾಗದವನ್ನು ತಬ್ಬಿಕೊಂಡು, ಮುತ್ತಿಟ್ಟು ಅತ್ತೆ. ಹುಚ್ಚನಂತೆ ಮೇಜಿಗೆ ತಲೆ ಗಟ್ಟಿಸಿಕೊಂಡೆ. ಏನು ಮಾಡಲಿ, ನನ್ನ ಲಲಿತಾ ಇಲ್ಲವಾದಳು.

ಅಂದಿನಿಂದ ನನಗೆ ಸಾವಿರ ಬಾರಿ, ಬಾಳು ನಿರಂತರ ದುರ್ಭರ ವ್ಯಥೆಯಾಗಿ, ಸಾಯಬೇಕೆನ್ನಿಸಿದೆ. ಆದರೆ ಅವಳ ನೆನಪು ಸಾಯದಂತೆ ಮುಳ್ಳು ಬೇಲಿ ಹಾಕಿದೆ.

ನನಗೀಗ ಯಾವ ಹಂಬಲೂ ಇಲ್ಲ, ಯಾವ ಬಯಕೆಯೂ ಇಲ್ಲ. ಲಲಿತಳದೊಂದೇ ನಿರಂತರ ಧ್ಯಾನ. ಕಾಯುವ ಪ್ರತಿಜ್ಞೆ ತೊಟ್ಟ ದೇವರಂತೆ, ಅವಳ ನೆನಪು ನನ್ನ ಸುತ್ತಲೂ, ಸದಾ ಸುತ್ತುತ್ತಿರುತ್ತದೆ.

ಅವಳ ನೆನಪಿನದೆ ನನಗೊಂದು ತಪಸ್ಸಾಗಿ ಹೋಗಿದೆ. ಅಂದು ಅವಳಾಡಿದ ಒಂದೊಂದು ಮಾತೂ, ಅಂದು ಅರ್ಥವಾಗದ ಒಂದೊಂದು ಧ್ವನಿಯೂ ಇಂದು ನನಗೆ ಅರ್ಥವಾಗುತ್ತಿದೆ. ಬಾಳಿನಲ್ಲಿ ಹೊಸ ಸತ್ಯದ ಅರಿವಾಗಿದೆ.

'ನಾನು ನಿನ್ನವಳಾಗದೆ ಹೋದರೂ ಪ್ರೀತಿಸಬಾರದೆ?.... [illegible] ಮುಖ್ಯವಲ್ಲ, ಮನಸು' ........

ಅಂದು ಲಲಿತಾ ಈ ಮಾತಾಡಿದಾಗ, ನನಗೆ ಅದರ ಸತ್ಯತೆಯ ಅರಿವಾಗಲಿಲ್ಲ.

ಈಗ ನನಗೆ ಅರಿವಾಗಿದೆ. ಲಲಿತಾ ಇಲ್ಲೆಲ್ಲೂ ಇಲ್ಲ. ಅಷ್ಟು ಬಯಸಿದ ಅವಳ ಮೈ ಏನಾಗಿ ಹೋಯಿತೋ. ಆದರೂ ಅವಳು ನನ್ನೊಳಗಿದ್ದಾಳೆ. ಚಿರಯೌವ್ವನೆಯಾಗಿದ್ದಾಳೆ, ನಿತ್ಯರೂಪಸಿಯಾಗಿದ್ದಾಳೆ. ಅಂದಿಗಿಂತ ಇಂದು ಅವಳು ನನಗೆ ಹೆಚ್ಚು ಪ್ರಿಯಳಾಗಿದ್ದಾಳೆ, ಹೆಚ್ಚು ಸಮೀಪವಾಗಿದ್ದಾಳೆ.

ಅವಳ ಮಾತಿನ ಸತ್ಯ ನನಗೆ ಇಂದು ಅರಿವಾಗಿದೆ. ಪ್ರೀತಿಗೆ ಮೈ ಮುಖ್ಯವಲ್ಲ, ಮನಸು.

ಅಂದೇ ನನಗಾ ಮಾತಿನ ಅರಿವಾಗಿದ್ದರೆ, ಲಲಿತಾ ಇಂದು ಬದುಕಿರುತ್ತಿದ್ದಳು. ಆದರೆ ಮೈಯ ಮೋಹದ ಮೌಢ್ಯ, ಅಂದು ನನಗಾ ಅರಿವು ಆಗದಂತೆ ಮಾಡಿತು.

ನಿಜ. `ಬಯಸಿದ್ದನ್ನು ಬಲಿಗೊಡದೆ, ಕೈಯಾರ ಆಹುತಿ ಹಾಕದೆ ಯಾವ ಸತ್ಯದ ಸಾಕ್ಷಾತ್ಕಾರವೂ ಆಗದೋ ಏನೋ. ನನ್ನ ಪಾಲಿಗಂತೂ, ಲಲಿತಳನ್ನು ಕೈಯಾರ ಕೊಂದಮೇಲೇ ಕಣ್ಣು ತೆರೆಯಿತು. ಅವಳ ಮಾತಿನ ಸತ್ಯದ ಸಾಕ್ಷಾತ್ಕಾರವಾಯಿತು. ನನಗೆ ಕಣ್ಣು ತೆರೆಯಲೆಂದೇ ಲಲಿತಾ ಆತ್ಮ ಬಲಿದಾನ ಮಾಡಿದಳೇನೋ!

ಅವಳ ಸಾವು ನನಗೆ ಇನ್ನೊಂದು ಪಾಠ ಕಲಿಸಿತು. ಹೆಣ್ಣು ಬರೀ ವಿಲಾಸದ ವಸ್ತುವಲ್ಲ, ಭೋಗ ಸಾಮಗ್ರಿಯಲ್ಲ – ಆಕೆ ಶುದ್ಧ ತ್ಯಾಗಮೂರ್ತಿ. ಅಂದು ಲಲಿತಾ, ತಾನು ಸಾಯುವುದನ್ನು ನಿಶ್ಚಯಿಸಿಕೊಂಡು, ನನ್ನನ್ನು ಬದುಕಿಸಲೆಂದು, ನನ್ನ ಭೋಗಕ್ಕೆ ತನ್ನ ಮೈ ನೀಡಿದಳು. ನನ್ನನ್ನು ಹೊಸದಾಗಿ ಹುಟ್ಟಿಸಿದಳು. ಆಕೆಯ ತ್ಯಾಗದಲ್ಲಿ ಸೃಷ್ಟಿಶಕ್ತಿ ಇದೆ; ನನ್ನ ಭೋಗದಲ್ಲಿ ವಿನಾಶದ ವಿಷವಿದೆ.

ನಿಜ. ನನ್ನ ಭೋಗದ ವಿಷ ಕುಡಿದು ಎಷ್ಟೋ ಜನ ಸತ್ತರು. ಸತ್ತ ನನ್ನನ್ನು ಲಲಿತೆಯ ತ್ಯಾಗ ಬದುಕಿಸಿ ಪುನಃ ಸೃಷ್ಟಿ ಮಾಡಿತು.

ನನ್ನನ್ನು ಬದುಕಿಸಲೆಂದು ಸತ್ತ ಲಲಿತಾ ನನ್ನನ್ನು ಬದುಕಿಸಿದಳು ಭ[illegible]ಷ್ಯದ [illegible]ರಿಯಾಟದಿಂದ ಬದುಕಿಸಿದಳು; ಅವಳೂ ಅಮರಳಾಗಿದ್ದಾಳೆ – ನನ್ನೆ[illegible]ಲ್ಲಿ."